# ಸಿದ್ಧಗಂಗಾ

ಸಂಪುಟ– ೨೧    ಸಂಚಿಕೆ - ೭    ಜುಲೈ, ೧೯೮೨


## ಗುರು ಸಿದ್ಧಲಿಂಗೇಶ

ಶ್ರೀ ಪರಮಜ್ಜ್ಯೋತಿರೂಪನೆನಿಸುವ ಪಾರ್ವ
ತೀಪತಿಯ ಹೃದಯದಲಿ ತೊಳಗುವ ಚಿದಾನಂದ
ರೂಪ ಬಸವೇಶ್ವರನ ಹೃತ್ಕಮಲದಲಿ ನಿಂದು ಲೋಕಮಂ ಪಾಲಿಸಲ್ಕೆ ।
ದ್ವಾಪರ ತ್ರೈತ ಕೃತಯುಗಗಳೊಳವತರಿಸಿ
ಪಾಪಮಂ ಕಳೆದು ನಿಜಪಾದಪದ್ಮಾನತರಿ
ಗಾಪರಮ ಸತ್ಕಳೆಯ ತೋರಿ ಮೆರೆದೈಯತಿಪ ಗುರುಸಿದ್ಧಲಿಂಗೇಶ್ವರ ॥

ಎನ್ನ ಮನವೆಡೆಬಿಡದೆ ನಿನ್ನ ಚರಣದೊಳಿರಲಿ
ಎನ್ನ ವಚನವು ನುತಿಯ ಮಾಳ್ಪುದರೊಳಿರುತಿರಲಿ
ಎನ್ನ ಕರಮರ್ಚನೆಯನೆಸಗುವುದನಿಚ್ಛೈಸಲಿ ಭಕ್ತಜನಕಲ್ಪಭೂಜ ।
ಎನ್ನ ಕರ್ಣವು ಕಥಾಕರ್ಣನದಿ ಮೋದಿಸಲಿ
ಎನ್ನ ಬುದ್ಧಿಯು ಭವಧ್ಯಾನವನು ಕಾಂಕ್ಷಿಸಲಿ
ಎನ್ನ ನೇತ್ರವು ಮೂರ್ತಿ ಸತ್ಪ್ರಭೆಯನೀಸಲಿ ಗುರು ಸಿದ್ಧಲಿಂ
ಗೇಶ್ವರ ॥

—ನೊಗಡಿ ವೀರಪ್ಪಶಾಸ್ತ್ರಿಗಳು

# ಈ ಸಂಚಿಕೆಯಲ್ಲಿ







# ಶ್ರೀವಾಣಿ

"ಮಾಡಬೇಕು, ಮಾಡದಂತಿರಬೇಕು
ಮಾಡುವ ಮಾಟದಲ್ಲಿ ತಾನಿಲ್ಲದಿರಬೇಕು"

ಬಸವಣ್ಣನವರ ಈ ಮಾತು ಅಧ್ಯಾತ್ಮ ಜೀವನದ ನೆಲೆಗಟ್ಟು. ಐಹಿಕ ಪಾರಮಾರ್ಥಿಕ ಜೀವನದ ಬೆಸುಗೆ. ಮಾಟದ ನೈಜಾರ್ಥ. ಅಹಂಕಾರ ಕರ್ತೃತ್ವ ಬುದ್ಧಿಯನ್ನು ಬಿಟ್ಟು ಮಾಡುವುದೇ ನಿಜವಾದ ಮಾಟ ಅಥವಾ ಕಾಯಕ. ಇಂಥ ಮಾಟದಿಂದ ವ್ಯಕ್ತಿಯು ತನು-ಮನ-ಭಾವಗಳು ಪರಿಶುದ್ಧವಾಗುತ್ತವೆ. ಸಮಾಜದಲ್ಲಿ ಸಮತೆ, ಸೋದರತೆ, ಶಾಂತಿಗಳು ಪ್ರತಿಷ್ಠಿತವಾಗುತ್ತವೆ. ಇಂಥ ಕಾಯಕ ತತ್ತ್ವವನ್ನು ಬಸವಾದಿ ಪ್ರಮಥರು ಮೊದಲು ತಮ್ಮ ಜೀವನದಲ್ಲಿ ಆಚರಿಸಿಕೊಂಡು ನಂತರ ಸಮಾಜದಲ್ಲಿ ತಂದರು. ಅದ್ದರಿಂದ ಆ ಸಮಾಜದ ಜನತೆ ಪ್ರಾಕೃತಿಕ ಜೀವನದಿಂದ ಬಿಡುಗಡೆ ಹೊಂದಿ ಆಧ್ಯಾತ್ಮಿಕ ಜಿವನವನ್ನು ಕುದಿರಿಸಿಕೊಂಡಿತ್ತು. ಅಂಥ ಸಮಾಜದ ಪುನರ್ ಸೃಷ್ಟಿ ಇಂದು ನಮ್ಮ ನಾಯಕರಿಂದ ಅವಶ್ಯ ಆಗಬೇಕಾಗಿದೆ. ಅದಾದಾಗಲೇ ಸುಖ, ಶಾಂತಿ.

"ಸಿದ್ಧಗಂಗಾ" ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104

ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು

ಪ್ರೊ|| ಚನ್ನಪ್ಪ ಎರೇಸೀಮೆ

* * *

ಸಹ ಸಂಪಾದಕರು

ಪಿ. ಎಸ್. ಚಂದ್ರಶೇಖರಯ್ಯ

ಬಸವರಾಜು

* * *

ಜಾಹೀರಾತು ವಿಭಾಗ

ಎಂ. ರೇಣುಕಾರಾಧ್ಯ

* * *

ಪ್ರಸಾರ ವಿಭಾಗ

ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು

ಹೆಚ್. ಬಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ

ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ

**ವಾರ್ಷಿಕ ಚಂದಾ 15-00 ರೂ**

**ಆಜೀವ ಸದಸ್ಯತ್ವ 151-00 ರೂ**

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ಸಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಪುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಅಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಕ್ಷೇತ್ರ-572104

ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.



# ಸಂಪಾದಕೀಯ

ಇಂದಿನ ರಾಷ್ಟ್ರೀಯ ಜೀವನದ ವಿದ್ಯಮಾನಗಳನ್ನೆಲ್ಲ ಮನಸ್ಸಿಗೆ ತಂದುಕೊಂಡು ವಿಚಾರ ಮಾಡುವ ಬುದ್ಧಿಜೀವಿಗಳೆಲ್ಲ ತೀರಾ ವಿವಂಚನೆಗೊಳಗಾಗಿದ್ದಾರೆ. ಒಂದು ಮಾತಂತೂ ಸ್ಪಷ್ಟವಾಗಿ ಗೋಚರಿಸುತ್ತದೆ: ಭಾರತದ ನಾಡಿಯ ಮಿಡಿತವನ್ನು ಗುರುತಿಸಿ ಅದಕ್ಕೆ ತಕ್ಕ ಕಾಯಕಲ್ಪ ಮಾಡುವ ನಾಯಕರ ಅಭಾವವಾಗಿದೆ, ಎಂಬುದು. ಪ್ರಬಲಶಕ್ತಿಯ ನಾಯಕರ ಅಭಾವವಾದಾಗ ಅನೇಕ ಅಸಾಂಗತ್ಯಗಳು ಉದ್ಭೂತವಾಗುವುದೇನೂ ಸುಳ್ಳಲ್ಲ. ನಿಜವಾಗಿ ನಾವು ಸಾವಿರಾರು ವರ್ಷಗಳ ಭಾರತ ಚರಿತ್ರೆಯ ಏಳುಬೀಳುಗಳನ್ನು ಅರ್ಥಮಾಡಿಕೊಂಡಿಲ್ಲವೆನ್ನಿಸುತ್ತದೆ. ನಾವು ಚರಿತ್ರೆಯ ಪುಟಪುಟಗಳನ್ನು ಅರ್ಥಮಾಡಿಕೊಂಡು ಸರಿಪಡಿಸಲು ಸಾಧ್ಯವಿಲ್ಲದಷ್ಟು ಗೋಜಲುಗೋಜಲಾಗಿ ಹೋಗುವ ಪೂರ್ವದಲ್ಲಿ ಭಾರತದ ರಾಜಕೀಯ, ಸಾಮಾಜಿಕ ಮುಖ್ಯವಾಗಿ ಆರ್ಥಿಕ ಸಮಸ್ಯೆಗಳನ್ನು ನಿರ್ಣಾಯಕವಾಗಿ ಬಗೆಹರಿಸದಿದ್ದರೆ, ಅವಶ್ಯವಾಗಿ ವಿಪತ್ಪರಂಪರೆಗಳನ್ನು ಅನುಭವಿಸಲೇಬೇಕಾಗಿ ಬರುವುದಂತೂ ಸತ್ಯ. ಸಮಗ್ರ ಭಾರತದ ಮೇಲ್ಮೆಯ ದೃಷ್ಟಿ ಭಾರತದಲ್ಲಿಂದು ಜೀವಿಸುತ್ತಿರುವ ಪ್ರತಿಯೊಬ್ಬನ ಕರ್ತವ್ಯ. ಅದಕ್ಕಾಗಿ ಪ್ರತಿಯೊಬ್ಬನ ಶಕ್ತಿ ಕ್ರಿಯೆಗಳೂ ಮೀಸಲು ಎಂಬ ಮನೋಭಾವ ಬಲಿತು ತನ್ನನ್ನು ಅರ್ಪಿಸಿಕೊಳ್ಳಬೇಕು. ಹೀಗಾದಾಗ ಜಗತ್ತಿನ ಪ್ರಬಲ ರಾಷ್ಟ್ರಗಳ ಗುಂಪಿಗೆ ಸರ್ವಶಕ್ತಿಗಳನ್ನು ಗರ್ಭೀಕರಿಸಿಕೊಂಡಿರುವ ಭಾರತ ಒಂದು ದಿನ ಏರೀತೆಂಬ ನಂಬುಗೆ ಬರಬಹುದು. ಹೀಗಾಗದಿದ್ದರೆ ಇಂದಿನಂಥ ಸ್ಪರ್ಧಾತ್ಮಕ ಜಗತ್ತಿನಲ್ಲಿ ಭಾರತದ ಸ್ಥಾನಮಾನಗಳು ತೀರಾ ಹಿಂದೆ ಬಿದ್ದು ಶಕ್ತಿಯಿದ್ದೂ ನಿಶ್ಶಕ್ತ ರಾಷ್ಟ್ರವೆನಿಸಿ ಅವಮಾನಗೊಳ್ಳಬೇಕಾದ ದಿನಗಳಿಗೆ ಶತಮಾನಕಾಲ ಕಾಯಬೇಕಾಗಿಲ್ಲ. ಇಂದಿನ ರಾಜಕೀಯ ಧುರೀಣರು ಗಂಭೀರವಾದ ಇಂಥ ಸಮಸ್ಯೆಗಳನ್ನು ಯೋಚಿಸಿ ಕಾರ್ಯರಂಗದಲ್ಲಿ ಕೆಲಸ ಮಾಡುತ್ತಿರುವಂತೆ ಕಾಣುವುದಿಲ್ಲ. ತಾವು ಕಟ್ಟಿಕೊಂಡಿರುವ ಪಕ್ಷ ಪಂಗಡಗಳ ಕೋಳೀ ಜಗಳದಲ್ಲಿ ಮುಳುಗಿಹೋಗಿದ್ದಾರೆ, ಪಕ್ಷಗಳಾದರೋ ಬೆರಳೆಣಿಕೆಗೆನಿಲ್ಲದಷ್ಟು. ರಾಜಕೀಯದಲ್ಲಿ ಸ್ಥಾನ ಸಿಕ್ಕದವರೆಲ್ಲ ತಮ್ಮದೇ ಆದ ಪಕ್ಷ ಕಟ್ಟಿಕೊಂಡು ಬಹು ಘಟಕಗಳುಳ್ಳ ಹಿಂದೂ ಸಮಾಜದ ಮೌಢ್ಯವನ್ನು ದುರುಪಯೋಗಪಡಿಸಿಕೊಂಡು ಚಿನ್ನಾಟವಾಡುತ್ತಿದ್ದಾರೆ. ಆಳುವ ಪಕ್ಷ ಯಾವುದೇ ಹೊಸದಾಗಿ ಬಂದರೂ ಅದಕ್ಕೆ ಕಾಲ್ತೊಡಕ್ಕು ಕೊಟ್ಟು ಬೀಳಿಸಿ ತಾವೇರಿ ಕಾರಭಾರುಮಾಡುವ ಸನ್ನಾಹದಲ್ಲಿ ತಮ್ಮ ಶಕ್ತಿಯನ್ನು ವಿನಿಯೋಗಿಸುವರಲ್ಲದೆ, ಸಮಗ್ರ ರಾಷ್ಟ್ರ ಹಿತಚಿಂತನೆ ಇವರಿಗಿದ್ದಂತಿಲ್ಲವೆಂಬುದನ್ನು ಪ್ರತಿದಿನದ ಪತ್ರಿಕಾ ವರದಿಗಳಿಂದ ಎಂಥ ದಡ್ಡನೂ ಊಹಿಸಬಹುದು. ಇಂಥ ರಾಜಕೀಯ ಧುರೀಣರ ಚೆಲ್ಲಾಟ-ಚಿನ್ನಾಟಗಳಿಗೆ ಕಡಿವಾಣ ಹಾಕುವತ್ತ ಪ್ರಜಾವರ್ಗ ಗಂಭೀರ ಚಿಂತನೆ ಮಾಡಬೇಕು ಇಲ್ಲದಿದ್ದರೆ ಜನತೆಯ ಪಾಡು ನಾಯಿಪಾಡು.

# ಹಳೆಯ ವಿದ್ಯಾರ್ಥಿಗಳ ಸಂಘ
## ಶ್ರೀ ಸಿದ್ಧಗಂಗಾ ಗುರುಕುಲ

ದಿನಾಂಕ 9–7–83 ರಂದು ಶ್ರೀಕ್ಷೇತ್ರದ ಹಳೆಯ ವಿದ್ಯಾರ್ಥಿ ಸಂಘದ ಕಾರ್ಯಕಾರೀ ಸಮಿತಿಯು ಸಭೆ ಸೇರಿ ಕೆಲವು ಮುಖ್ಯ ಅಂಶಗಳನ್ನು ಚರ್ಚಿಸಿತು.

1) ಸಂಘದ ವಾರ್ಷಿಕ ಚಂದಾ ಹಣ 15 ರೂ.ಗಳನ್ನು ಪಾವತಿ ಮಾಡುವಂತೆ ಸದಸ್ಯರನ್ನು ಅಂಚೆಯ ಮೂಲಕ ಪ್ರಾರ್ಥಿಸಿಕೊಳ್ಳುವುದು.

2) ಸಂಘಕ್ಕೆ 101 ರೂ.ಗಳನ್ನು ಒಂದೇ ಬಾರಿಗೆ ಪಾವತಿ ಮಾಡಿ ಸಂಘದ "ಆಜೀವ ಸದಸ್ಯತ್ವವನ್ನು" ಪಡೆದುಕೊಳ್ಳುವ ಅವಕಾಶವನ್ನು ಸಂಘವು ಸರ್ವಾನುಮತ ದಿಂದ ಒಪ್ಪಿತು.

1983 ನೇ ಸಾಲಿನ ಸಂಘದ ಸದಸ್ಯತ್ವವನ್ನು ಪಾವತಿ ಮಾಡದೇ ಇರುವ ಮಿತ್ರರು ಮೇಲಿನ ಎರಡು ಅವಕಾಶಗಳಲ್ಲೊಂದನ್ನು ಆಯ್ಕೆ ಮಾಡಿಕೊಂಡು ಹಣವನ್ನು ಸಂಘಕ್ಕೆ ಕೂಡಲೆ ಪಾವತಿ ಮಾಡಬೇಕೆಂದು ಪ್ರಾರ್ಥಿಸಲಾಗಿದೆ.

ತಾ॥ 12–7–83 ರಂದು ಮಂಗಳವಾರ ತುಮಕೂರಿನ ಗಾಯತ್ರಿ ಚಿತ್ರ ಮಂದಿರದಲ್ಲಿ ನಮ್ಮ ಸಂಘದ ವತಿಯಿಂದ ಹೊರತಂದಿರುವ **"ಶ್ರೀ ಸಿದ್ಧಗಂಗಾ"** ಸಾಕ್ಷ್ಯ ಚಿತ್ರದ ಬಿಡುಗಡೆ ಸಮಾರಂಭವು ನಡೆಯಿತು. ಸಮಾರಂಭವು ಪೂಜ್ಯ ಸನ್ನಿಧಿಯವರ ದಿವ್ಯ ನೇತೃತ್ವದಲ್ಲಿ ರಾಜ್ಯದ ವಾರ್ತಾ ಸಚಿವರಾದ ಶ್ರೀ ಎಂ. ರಘುಪತಿಯವರ ಬಿಡುಗಡೆ ಯೊಂದಿಗೆ ನಡೆಯಿತು. ಶ್ರೀ ಗೊ. ರು. ಚನ್ನಬಸಪ್ಪನವರು ನಿರ್ದೇಶಿಸಿದ ಈ ವರ್ಣರಂಜಿತ ಚಿತ್ರವು ಎಲ್ಲೆಡೆಯಲ್ಲಿಯೂ ಪ್ರದರ್ಶಿಸಬಹುದು. ಚಿತ್ರಮಂದಿರಗಳಲ್ಲಿ ಪ್ರದರ್ಶಿಸುವ 35 ಎಂ.ಎಂ. ಸೈಜಿನ ಪ್ರತಿಯನ್ನು ಕೊಳ್ಳಲು ಸು. 8000 ರೂ.ಗಳು, 16 ಎಂ.ಎಂ. ಪ್ರೊಜೆಕ್ಟರುಗಳಲ್ಲಿ ಪ್ರದರ್ಶಿಸುವ ಪ್ರತಿಗಳಿಗೆ ಸು. 6000 ರೂ.ಗಳು ಬೆಲೆಯಾಗುತ್ತದೆ. ಪ್ರತಿಗಳನ್ನು ಪಡೆಯಲಿಚ್ಛಿಸುವ ಅಭಿಮಾನಿಗಳು ಈ ಕೆಳಗಿನ ವಿಳಾಸದೊಡನೆ ವ್ಯವಹರಿಸಬೇಕೆಂದು ಪ್ರಾರ್ಥಿಸಲಾಗಿದೆ.

**ಕಾರ್ಯದರ್ಶಿಗಳು**
**ಹಳೆಯ ವಿದ್ಯಾರ್ಥಿಗಳ ಸಂಘ**
ಶ್ರೀ ಸಿದ್ಧಗಂಗಾ ಗುರುಕುಲ
ತುಮಕೂರು ಜಿಲ್ಲೆ



(ಮುಂದುವರಿದದ್ದು)

# ಶ್ರೀ ಉದ್ದಾನೇಶ್ವರ ಶತಕ

—ಜಿ. ವಿ. ರಾಜಶೇಖರಯ್ಯ

ಬಾಲ್ಯಯೌವನ ವಾರ್ಧಕಂಗಳ
ದಾಯವೇ ವಿಧಿ ವಿಷ್ಣುರುದ್ರರು
ಕಾಯಕಿವು ತ್ರಿಯವಸ್ಥೆಗಳು ಮಾಯಾಗುಣಂಗಳಿವೂ ।
ಧ್ಯೇಯುಬ್ರಹ್ಮ ಗೃಹಸ್ಥವಿಷ್ಣುವೆ
ರಾಯ ರುದ್ರನೆಯೋಗಿಯೆಂಬೀ
ದಾಯ ವರುಪಿದ ಜೀಯ ಉದ್ದಾನೇಶದಯವಾಗೈ ॥೧೩॥

ಮಾಯೆಯೆನ್ನಲು ಕತೃ ಕರ್ಮವು
ಕ್ರೀಯೆ ಯೆಂಬೀ ಮೂರು ಶಕ್ತಿಯು
ತಾಯಿ ಸರಸತಿ ವಿದ್ಯೆಯನು ಸಿರಿಸಂಪದವಗೌರೀ ।
ಆಯುವನು ಕೊಟ್ಟೊಡ ಧರ್ಮಂ
ನ್ಯಾಯ ನಡೆಸುವರಿವರ ಚೇತನ
ದಾಯ ರಾಯನೆ ಜೀಯ ಉದ್ದಾನೇಶ ದಯವಾಗೈ ॥೧೪॥

ಆಯುವೇ ಕಾರಣವು ಸೌಖ್ಯಕೆ
ಆಯುವೇ ಕಾರಣವು ದುಃಖಕೆ
ಆಯುವೇ ಜನಮರಣ ರವಿ ಶಶಿಬಿಂಬದೊಳ ಬೆಳಗೂ ।
ಆಯುವಳಿವುಳಿವುಗಳ ಹಿನ್ನೆಲೆ
ಯಾಯು ಹೆಚ್ಚಲು ಪ್ರಾಣಯಾಮೋ
ಪಾಯ ಸೂಚಿಸಿದಾರ್ಯ ಉದ್ದಾನೇಶ ದಯವಾಗೈ ॥೧೫॥

ಬಿಂದು ನಿಗ್ರಹದಿಂದ ಮಾರುತಿ
ಸಿಂಧುವನು ದಾಟಿದನು ಭಾರವ
ನಂದಿಯೆಳೆಯುವನುಳುಪ ಬಳಲದೆ ಶಿವನ ಹೊತ್ತಿಹನೂ ।
ಹಿಂದೆ ಋಷಿಗಳು ಬಿಂದುನಿಗ್ರಹ
ದಿಂದ ಬ್ರಾಹ್ಮಣ ಕಂಡರೆಂದಾ
ಬಿಂದು ಮಹಿಮೆಯನೊರೆದ ಉದ್ದಾನೇಶ ದಯವಾಗೈ ॥೧೬॥

(ಮುಂದುವರಿಯುವುದು)

# ಕ್ಷೇತ್ರವಾರ್ತೆ

## ಸಂಸ್ಕೃತ ಪಾಠಶಾಲಾ ಪಠ್ಯ ಪುಸ್ತಕಗಳ ವಿಚಾರ ಸಂಕಿರಣ

ದಿನಾಂಕ 11-7-83 ರಂದು ಸೋಮವಾರ ಹಿಂದೆ ಏರ್ಪಡಿಸಿದ್ದಂತೆ ಕರ್ನಾಟಕ ರಾಜ್ಯದ ಎಲ್ಲಾ ಸಂಸ್ಕೃತ ಕಾಲೇಜುಗಳ ಪ್ರಾಚಾರ್ಯರ ಸಂಘದ ನಿಯೋಜಿತ ಸಮಾವೇಶವು ಬೆಳಿಗ್ಗೆ 10 ಘಂಟೆಯಿಂದ ನಡೆಯಿತು. ಮುಖ್ಯವಾಗಿ ಸಂಸ್ಕೃತ ಪ್ರಥಮಾ, ಕಾವ್ಯ ಹಾಗೂ ಸಾಹಿತ್ಯ ತರಗತಿಗಳ ಪರೀಕ್ಷೆಗಳಿಗೆ ನಿಗದಿಯಾದ ಪಠ್ಯ ಪುಸ್ತಕಗಳ ಅಧ್ಯಾಪನಕ್ಕೆ ಸಂಬಂಧಿಸಿದ ಸಮಸ್ಯೆಗಳ ಬಗ್ಗೆ ಚರ್ಚಿಸಲಾಯಿತು. ಈ ಸಭೆಯಲ್ಲಿ ರಾಜ್ಯದ ಎಲ್ಲ ಸಂಸ್ಕೃತ ಕಾಲೇಜುಗಳ ಪ್ರಾಚಾರ್ಯರುಗಳು ಭಾಗವಹಿಸಿದ್ದರು. ಇದೇ ಸಂದರ್ಭದಲ್ಲಿ ಸಂಘದ ಇನ್ನೂ ಕೆಲವು ನಡವಳಿಕೆಗಳ ಬಗ್ಗೆ ನಿರ್ಣಯಗಳನ್ನು ಅಂಗೀಕರಿಸಲಾಯಿತು.

ಇದೇ ದಿನ ಹಗಲು 12 ಘಂಟೆಯಿಂದ ಸಂಸ್ಕೃತ ಪಠ್ಯ ಪುಸ್ತಕಗಳ ರಾಜ್ಯ ಮಟ್ಟದ ಪ್ರಥಮಾ ವಿಚಾರ ಸಂಕಿರಣವು ನಡೆಯಿತು. ಪ್ರಶ್ನೆ ಪತ್ರಿಕೆವಾರು ವಿಷಯಗಳನ್ನೂ ಕೂಲಂಕಷವಾಗಿ ಚರ್ಚಿಸಲಾಯಿತು. ಈ ವಿಚಾರ ಸಂಕಿರಣದ ಉದ್ಘಾಟನೆಯನ್ನು ಶ್ರೀ. ನಿ. ಪ್ರ. ಸ್ವ. ಶ್ರೀ ಶ್ರೀ ಗೌರೀಶಂಕರಸ್ವಾಮಿಗಳವರು ನೆರವೇರಿಸಿದರು. ಅಧ್ಯಕ್ಷತೆಯನ್ನು ಸಂಸ್ಕೃತ ಶಿಕ್ಷಣದ ಉಪನಿರ್ದೇಶಕರಾದ ಶ್ರೀ ಜಿ. ಚನ್ನವೀರಸ್ವಾಮಿರವರು ವಹಿಸಿದ್ದರು.

ಇದೇ ದಿನ ಸಂಜೆ 6 ಘಂಟೆಯಿಂದ ಪರಮ ಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ನೇತೃತ್ವದಲ್ಲಿ, ಹಾಗೂ ಶ್ರೀ ಜಿ. ಚನ್ನವೀರಸ್ವಾಮಿರವರ ಅಧ್ಯಕ್ಷತೆಯಲ್ಲಿ ಸಂಸ್ಕೃತ ಪ್ರಚಾರೋಪನ್ಯಾಸ ಮಾಲೆಯ ಉದ್ಘಾಟನಾ ಸಮಾರಂಭವು ಜರುಗಿತು. ಶ್ರೀ ಕೆ. ಬಸವರಾಜುರವರು ಸ್ವಾಗತ ಕೋರಿದರು. ಶ್ರೀ ಕೆ. ಹರಿದಾಸ ಉಪಾಧ್ಯಾಯರು ಸಭೆಯನ್ನು ಉದ್ಘಾಟಿಸಿದರು. ನಂತರ ಬ್ರ. ಶ್ರೀ. ವಿದ್ವಾನ್. ವೈ. ವಿಶ್ವನಾಥಶಾಸ್ತ್ರಿಗಳವರು ಸಂಸ್ಕೃತ ಭಾಷೆಯ ಮಹತ್ವ, ಪ್ರಯೋಗಸಾಧುತ್ವ, ಹಾಗೂ ವಿಶಿಷ್ಟ ಪ್ರಯೋಜನಗಳನ್ನು ಕುರಿತು ಸರಳವಾಗಿ, ಸ್ವಾರಸ್ಯವಾಗಿ ಭಾಷಣ ಮಾಡಿದರು. ನಂತರ ಪರಮ ಪೂಜ್ಯ ಶ್ರೀ ಶ್ರೀ ಗಳವರು ಆಶೀರ್ವಾದದಲ್ಲಿ ಜನಜೀವನದ ಎಲ್ಲ ಮೌಲ್ಯಗಳನ್ನೊಳಗೊಂಡ ಸಂಸ್ಕೃತ ಭಾಷೆಯ ಪ್ರಚಾರದ ಔಚಿತ್ಯವನ್ನು ಒತ್ತಿ ಹೇಳಿದರು. ಶ್ರೀ ಎಸ್. ಪಿ. ಶಿವಶಂಕರ್ ರವರು ವಂದನೆ ಸಲ್ಲಿಸಿದರು. ಮಂಗಳದೊಡನೆ ಸಭೆಯು ಮುಕ್ತಾಯಗೊಂಡಿತು.



# ಜಗದ್ದರ್ಶನ ಮಾಲೆ–೨

## ದ್ವೈತ ದರ್ಶನ

—ಪ್ರೊ. ಕೆ. ಟಿ. ಪಾಂಡುರಂಗಿ

ಭಾರತದಲ್ಲಿ ಪ್ರಚಲಿತವಾಗಿರುವ ಮತ-ಧರ್ಮಗಳಲ್ಲಿ ದ್ವೈತಮತವು ಒಂದು ಪ್ರಮುಖವಾದ ಮತಧರ್ಮವಾಗಿದೆ. ಇದರ ಅನುಯಾಯಿಗಳು ಕರ್ನಾಟಕ, ಮಹಾರಾಷ್ಟ್ರ, ಆಂಧ್ರ, ತಮಿಳುನಾಡು, ಕೇರಳ, ಗೋವಾ ಪ್ರದೇಶಗಳಲ್ಲಿ ಅಧಿಕ ಸಂಖ್ಯೆಯಲ್ಲಿಯೂ; ವೃಂದಾವನ, ಗಯಾ, ಚಿತ್ರಕೂಟಗಳಲ್ಲಿ ಕೆಲವರೂ ಇರುವರು. ಬಂಗಾಲದಲ್ಲಿ ಪ್ರಚಲಿತವಿರುವ ಚೈತನ್ಯ ಸಂಪ್ರದಾಯವು ಮಾಧ್ವಸಂಪ್ರದಾಯದ ಒಂದು ಶಾಖೆಯಾಗಿದೆ. ಅವರ ಗುರುಪರಂಪರೆಯಲ್ಲಿ ಶ್ರೀ ಮಧ್ವಾಚಾರ್ಯರಿಂದ ಶ್ರೀ ವ್ಯಾಸ ರಾಜರವರೆಗಿನ ಮಾಧ್ವಯತಿಗಳನ್ನು ಗುರುಗಳೆಂದು ಪರಿಗಣಿಸುತ್ತಾರೆ. ವೈದಿಕಧರ್ಮದ ವೇದಾಂತದರ್ಶನದ ಮತತ್ರಯಗಳಲ್ಲಿ ದ್ವೈತಮತವು ಒಂದು ಪ್ರಧಾನ ಮತವಾಗಿದೆ. ಈ ಮತದ ಸಿದ್ಧಾಂತಗಳನ್ನು ತಿಳಿದುಕೊಂಡು ಆಧ್ಯಾತ್ಮಿಕ ಉನ್ನತಿಯನ್ನು ಮಾಡಿಕೊಳ್ಳಲು ಎಲ್ಲ ವರ್ಗದವರಿಗೂ ಅಧಿಕಾರವಿದೆ. ಅಧಿಕಾರವನ್ನು ವೇದಾಧಿಕಾರ, ತಂತ್ರಾಧಿಕಾರ ಮತ್ತು ನಾಮಾಧಿಕಾರ ಎಂದು ವಿಂಗಡಿಸಿ ಆಧ್ಯಾತ್ಮಿಕ ಸಾಹಿತ್ಯದ ಅಧ್ಯಯನ ಮತ್ತು ಸಾಧನಕ್ರಮದಲ್ಲಿ ಭಿನ್ನಕ್ರಮಗಳನ್ನು ಹೇಳಿದ್ದರೂ ಆಧ್ಯಾತ್ಮಿಕ ಉನ್ನತಿಯ ಅಧಿಕಾರವನ್ನು ಈ ಮತದಲ್ಲಿ ಎಲ್ಲರಿಗೂ ಕೊಡಲಾಗಿದೆ. 'ಅಂತ್ಯಜಾ ಅಪಿ ಯೇ ಭಕ್ತಾ ನಾಮಜ್ಞಾನಾಧಿಕಾರಿಣಃ' ಎಂದು ಅಂತ್ಯಜರಿಗೂ ಆಧ್ಯಾತ್ಮಿಕ ಸಾಧನೆಯ ಅಧಿಕಾರವಿರುವುದನ್ನು ಶ್ರೀಮಧ್ವಾಚಾರ್ಯರು ತಮ್ಮ ಭಾಷ್ಯದಲ್ಲಿ ಸಾರಿದ್ದಾರೆ. ಆದುದರಿಂದಲೇ ಅಪರೋಕ್ಷಜ್ಞಾನಿಗಳೇ ರಚಿಸಬೇಕೆಂಬ ನಿರ್ಬಂಧವಿರುವ ಹರಿದಾಸ ಸಾಹಿತ್ಯದ ನಿರ್ಮಾತೃಗಳಲ್ಲಿ ಒಬ್ಬರಾದ ಕನಕದಾಸರು ಈ ಮತದಲ್ಲಿಯ ಗಣ್ಯಪುರುಷರೆನಿಸಿದ್ದಾರೆ. ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಅಕ್ಕಸಾಲಿಗರೇ ಮೊದಲಾದವರು ಈ ಮತದ ಅನುಯಾಯಿಗಳಾಗಿದ್ದಾರೆ.

ಐತಿಹಾಸಿಕವಾಗಿ ಶ್ರೀ ಮಧ್ವಾಚಾರ್ಯರು ಕ್ರಿ.ಶ. ೧೩ ನೇ ಶತಮಾನದಲ್ಲಿ ಈ ಮತದ ಪ್ರತಿಷ್ಠಾಪನೆಯನ್ನು ಮಾಡಿದ್ದರೂ ಈ ಮತದ ತತ್ತ್ವಗಳೂ, ಸಂಪ್ರದಾಯಗಳೂ ಬಹು ಪ್ರಾಚೀನವಾದವು. ವೇದ, ಉಪನಿಷತ್, ಪಂಚರಾತ್ರಾಗಮ ಸಂಹಿತೆಗಳು, ಗೀತೆ, ಇತಿಹಾಸ-ಪುರಾಣಗಳು ಈ ಮತದ ಆಕರಗ್ರಂಥಗಳು—

ಋಗ್ಯಜುಃ ಸಾಮಾಥರ್ವಾಶ್ಚ ಭಾರತಂ ಪಂಚರಾತ್ರಕಮ್ ।
ಮೂಲರಾಮಾಯಣಂ ಚೈವ ಶಾಸ್ತ್ರಮಿತ್ಯಭಿಧೀಯತೇ ॥
ಯಚ್ಚಾನುಕೂಲಮೇತಸ್ಯ ತಚ್ಚ ಶಾಸ್ತ್ರಂ ಪ್ರಕೀರ್ತಿತಮ್ ॥

ಎಂದು ಈ ಮತದ ಆಕರಗ್ರಂಥಗಳನ್ನು ನಿರ್ದೇಶಿಸಲಾಗಿದೆ. ದ್ವೈತಮತದ ಮೌಲಿಕ ಸಿದ್ಧಾಂತಗಳು ಇವು—

೧) ವಿಷ್ಣುವು ಸರ್ವೋತ್ತಮನು, ಸರ್ವಗುಣಪೂರ್ಣನು, ಸ್ವತಂತ್ರನು, ಸರ್ವನಿಯಾಮಕನು; ಸರ್ವಾಂತರ್ಯಾಮಿಯು, ಜ್ಞಾನಾನಂದಮಯನು, ಸರ್ವಜ್ಞನು, ಸರ್ವಕರ್ತನು, ಅಚಿಂತ್ಯಾದ್ಭುತ ಶಕ್ತಿಯುಕ್ತನು. ಈ ಎಲ್ಲ ಮಾಹಾತ್ಮ್ಯವುಳ್ಳ ವಿಷ್ಣು ಸರ್ವೋತ್ತಮತ್ವವು ಈ ಮತದ ಕೇಂದ್ರ ಸಿದ್ಧಾಂತ. ಈ ವಿಷ್ಣುವೇ ವೇದಾಂತದ ಬ್ರಹ್ಮತತ್ತ್ವವು.

೨) ಜೀವ ಮತ್ತು ಜಗತ್ತು ವಿಷ್ಣುವಿಗೆ ಅಧೀನವಾದ ಆದರೆ ಸತ್ಯವಾದ ತತ್ತ್ವಗಳು. ಅವು ಮಾಯೆಯಿಂದ ಕಂಡುಬರುವಂಥವಲ್ಲ. ಜೀವರು ಅನೇಕರು, ಅಲ್ಪಜ್ಞರು, ಅಲ್ಪಶಕ್ತಿಯುಳ್ಳವರು; ಸಾತ್ತ್ವಿಕ, ರಾಜಸ, ತಾಮಸ, ಎಂಬ ಸ್ವಭಾವ ಭೇದವುಳ್ಳವರು. ಪರಮಾತ್ಮನಿಗಿಂತ ಅತ್ಯಂತ ಭಿನ್ನರು, ಅವನ ಪ್ರತಿಬಿಂಬರು. ಜೀವರು ಪರಸ್ಪರವಾಗಿಯೂ ಭಿನ್ನರು. ಜಡದಿಂದಲೂ ಭಿನ್ನರು, ಜಗತ್ತು ಜಡ ಪ್ರಕೃತಿಯಿಂದ ಉಂಟಾಗುತ್ತದೆ. ಇದು ಜೀವಪರಮಾತ್ಮರಿಗಿಂತ ಭಿನ್ನವಾದುದು, ಸತ್ಯವಾದುದು.

೩) ನಿಷ್ಕಾಮಕರ್ಮಾನುಷ್ಠಾನ, ಜ್ಞಾನ, ಭಕ್ತಿ, ಭಗವತ್ಪ್ರಸಾದ ಇವು ಆಧ್ಯಾತ್ಮಿಕ ಉನ್ನತಿಯ ಸಾಧನಗಳು. ಕರ್ಮ ಸಂನ್ಯಾಸವು ಉಚಿತವಲ್ಲ. ಅದು ಸಾಧ್ಯವೂ ಇಲ್ಲ. ಅದರಿಂದ ಪ್ರಯೋಜನವೂ ಇಲ್ಲ. ಭಗವದಾರಾಧನರೂಪವಾಗಿ ಭಕ್ತಿಯಿಂದ ಸ್ವವಿಹಿತಕರ್ಮಾನುಷ್ಠಾನವನ್ನು ಮಾಡುವದೇ ಧರ್ಮ. ಭಗವಂತನು ಸ್ವತಂತ್ರ; ಜೀವರು ಪರತಂತ್ರ. ಭಗವಂತನೇ ಸರ್ವವ್ಯಾಪಾರಗಳನ್ನು ಮಾಡಿಸುವವನು; ಕರ್ತೃತ್ವ, ಭೋಕ್ತೃತ್ವ, ಸಾಧನಗಳು, ಫಲ ಎಲ್ಲವೂ ಅವನಿಗೇ ಸೇರಿದ್ದು; ಅವನ ಪ್ರೇರಣೆಯಿಂದಲೇ ಎಲ್ಲವೂ ನಡೆಯುವುದು.

ದ್ರವ್ಯಂ ಕರ್ಮಚ ಕಾಲಶ್ಚ ಸ್ವಭಾವೋ ಜೀವ ಏವ ಚ ।
ಯದನುಗ್ರಹತಃ ಸಂತಿ, ನ ಸಂತಿ ಯದುಪೇಕ್ಷಯಾ ॥

ಎಲ್ಲ ಪದಾರ್ಥಗಳು, ಕಾಲ, ಕರ್ಮ, ಆಯಾ ಪದಾರ್ಥಗಳ ಸ್ವಭಾವ, ಜೀವರು ಅವನ ಅನುಗ್ರಹವಿದ್ದರೆ ತಮ್ಮ ತಮ್ಮ ವ್ಯಾಪಾರವನ್ನು ಮಾಡಲು ಸಮರ್ಥರು;



ಇಲ್ಲವಾದರೆ ಇಲ್ಲ, ಇತ್ಯಾದಿಯಾಗಿ ಭಗವಂತನ ಮಹಿಮೆಯನ್ನು ತಿಳಿದುಕೊಳ್ಳುವುದೇ ಜ್ಞಾನ. ಇಂಥ ಮಾಹಾತ್ಮ್ಯಜ್ಞಾನಸಹಿತವಾದ ಸ್ನೇಹವೇ ಭಕ್ತಿ. ಈ ಭಕ್ತಿಯಿಂದ ಭಗವಂತನು ಪ್ರಸನ್ನನಾಗಿ ಅಜ್ಞಾನವನ್ನು ಪರಿಹರಿಸಿ ಜೀವರಿಗೆ ತನ್ನ ಅಪರೋಕ್ಷದರ್ಶನವನ್ನು ಕೊಡುವನು. ಜೀವರು ತಮ್ಮ ಸ್ವರೂಪಾನಂದಾವಿರ್ಭಾವವನ್ನು ಪಡೆಯುವರು. ಇದು ದ್ವೈತಮತದಲ್ಲಿಯ ಪರಮಾತ್ಮ ಸ್ವರೂಪ, ಜೀವ-ಜಂತುಗಳ ಸ್ವರೂಪ ಮತ್ತು ಆಧ್ಯಾತ್ಮಿಕ ಉನ್ನತಿಯ ಸಾಧನಗಳ ಸ್ವರೂಪದ ಸಂಕ್ಷಿಪ್ತ ವಿವರಣೆ.

ದ್ವೈತಮತದ ಈ ಮೌಲಿಕಸಿದ್ಧಾಂತಗಳು ವೇದ, ಉಪನಿಷತ್ತುಗಳು, ಪಂಚರಾತ್ರಾಗಮ, ಗೀತೆ ಮತ್ತು ಇತಿಹಾಸ ಪುರಾಣಗಳಲ್ಲಿ ಅಡಕವಾಗಿಯೇ ಇದ್ದವು. ಬ್ರಹ್ಮತರ್ಕವೇ ಮೊದಲಾದ ಪ್ರಾಚೀನಗ್ರಂಥಗಳಲ್ಲಿ ಇವುಗಳನ್ನು ಯುಕ್ತಿಯಿಂದ ಸಮರ್ಥಿಸಲಾಗಿತ್ತು. ಐತಿಹಾಸಿಕ ಕಾಲದ ಶ್ರೀ ಮಧ್ವಾಚಾರ್ಯರು ೧೩ ನೇ ಶತಮಾನದಲ್ಲಿ ಅವತರಿಸಿ ಇವುಗಳನ್ನು ಪುನಃ ಪ್ರತಿಷ್ಠಾಪಿಸಿ ದ್ವೈತಮತವನ್ನು ದೃಢಪಡಿಸಿದರು.

'ವಿಷ್ಣು' ಮತ್ತು 'ನಾರಾಯಣ' ಇವರ ಉಲ್ಲೇಖವು ವೇದಲ್ಲಿಯೇ ಬಂದಿದೆ. ಪುರುಷಸೂಕ್ತದ ಋಷಿಯು ನಾರಾಯಣನೆಂಬುದು ಪ್ರಸಿದ್ಧವಿದೆ. ಸಮುದ್ರಶಾಯಿಯ ನಾಭಿಯಲ್ಲಿ ವಿಶ್ವವೆಲ್ಲ ಅಡಗಿರುವ ಉಲ್ಲೇಖವು ಋಗ್ವೇದದ ೧೦ ನೆಯ ಮಂಡಲದ ೮೨ ನೆಯ ಸೂಕ್ತದಲ್ಲಿ ಬಂದಿದೆ. ೧ ನೆಯ ಮಂಡಲದ ೧೬೪ ನೆಯ ಸೂಕ್ತದಲ್ಲಿ 'ಪ್ರಕೃತಿ'ಯ ಏಳು ಹಂತದ ವಿಕೃತಿಗಳು ವಿಷ್ಣುವಿನ ಅಧೀನವಾಗಿವೆ ಎಂಬ ಉಲ್ಲೇಖ ಬಂದಿದೆ. ಋಗ್ವೇದದಲ್ಲಿ ಒಂದುನೂರು ಸಲ ವಿಷ್ಣುವಿನ ಉಲ್ಲೇಖ ಬಂದಿದೆ. ಬೇರೆ ಪೌರಾಣಿಕ ದೇವತೆಗಳ ಉಲ್ಲೇಖವಿಲ್ಲ. ಶತಪಥಬ್ರಾಹ್ಮಣ, ತೈತ್ತಿರೀಯ ಆರಣ್ಯಕ, ಇತ್ಯಾದಿಗಳಲ್ಲಿ ನಾರಾಯಣನ ಉಲ್ಲೇಖವಿದೆ. ಯಜುರ್ವೇದದಲ್ಲಿ 'ಯಜ್ಞ'ವನ್ನು 'ವಿಷ್ಣು'ವೆಂದು ಕರೆಯಲಾಗಿದೆ.' ಛಾಂದೋಗ್ಯ ಉಪನಿಷತ್ತಿನಲ್ಲಿ ಕೃಷ್ಣ ಆಂಗಿರಸ ದೇವಕೀಪುತ್ರನ ಉಲ್ಲೇಖವಿದೆ. ನಿರುಕ್ತದಲ್ಲಿ 'ಅಗ್ನಿರ್ದೇವಾನಾಮವಮಃ, ವಿಷ್ಣುಃ ಪರಮಃ ತದಂತರಾ ಸರ್ವಾದೇವತಾಃ ಎಂದು ವಿಷ್ಣು ಸರ್ವೋತ್ತಮತ್ವವನ್ನು ಸ್ಪಷ್ಟವಾಗಿ ಹೇಳಲಾಗಿದೆ. ತ್ರಿವಿಕ್ರಮ, ವಾಮನ, ವರಾಹ ಅವತಾರಗಳೂ ವೈದಿಕ ವಾಙ್ಮಯದಲ್ಲಿ ಉಲ್ಲೇಖಿಸಲ್ಪಟ್ಟಿವೆ. ಮಹಾಭಾರತದ 'ನಾರಾಯಣೀಯ' ವಿಭಾಗದಲ್ಲಿ ವಾಸುದೇವ, ಸಂಕರ್ಷಣ ಇತ್ಯಾದಿ ವ್ಯೂಹಪಂಚಕದ ವಿವರ ಬಂದಿದೆ. ಹೀಗೆ 'ವಿಷ್ಣು' ದೇವತೆಯ ಮತ್ತು ವಿಷ್ಣುಸರ್ವೋತ್ತಮತ್ವಸಿದ್ಧಾಂತದ ಪರಂಪರೆ ಬಹಳ ಪ್ರಾಚೀನವಾದುದು. ಆದರೆ ಶ್ರೀ ಮಧ್ವಾಚಾರ್ಯರು 'ವಿಷ್ಣು' ಓರ್ವ ಪೌರಾಣಿಕ ದೇವತೆ ಎಂಬ ಸ್ಥೂಲ ನೆಲೆಗೇ ನಮ್ಮ ದೃಷ್ಟಿ ನಿಲ್ಲದಂತೆ ಅವನು 'ಬ್ರಹ್ಮತತ್ತ್ವ'

ಎಂಬುದನ್ನು ಪ್ರತಿಪಾದಿಸಿದರು. ನಿರ್ಗುಣ, ನಿರಾಕಾರ ಎಂಬ ನೆಲೆಗೇ ಬ್ರಹ್ಮತತ್ತ್ವವು ನಿಲ್ಲದಂತೆ ಅದೊಂದು ಅನಂತಗುಣಪರಿಪೂರ್ಣ 'ತತ್ತ್ವ'ವೆಂಬುದನ್ನು ಪ್ರತಿಪಾದಿಸಿದರು. ಅವರ ಈ ವಿಷ್ಣು-ಬ್ರಹ್ಮ ಐಕ್ಯ ಸಿದ್ಧಾಂತವು ವೇದಾಂತದಲ್ಲಿ ಒಂದು ಕ್ರಾಂತಿಯನ್ನುಂಟುಮಾಡಿತು. ಅನಂತಕಲ್ಯಾಣಗುಣಪರಿಪೂರ್ಣ, ಜ್ಞಾನಾನಂದಮಯ, ಸ್ವತಂತ್ರ, ಸರ್ವಾಂತರ್ಯಾಮಿ, ಸರ್ವನಿಯಾಮಕ ಎಂಬ ಈ 'ಬ್ರಹ್ಮ-ವಿಷ್ಣು' ತತ್ತ್ವವನ್ನು ಈ ಸ್ವರೂಪಕ್ಕೆ ಚ್ಯುತಿ ಬರದಂತೆ ಯಾವ ಹೆಸರಿನಿಂದಲೂ ಕರೆಯಬಹುದು ಎಂದು ಶ್ರೀ ಮಧ್ವಾಚಾರ್ಯರು ಸಾರಿದರು.

'ಸ ಅಂತಕಃ. ಸ ರುದ್ರಃ. ಸ ಈಶಃ ಯ ಹರಿಃ'
'ಈಶಾನಾದೇವ ಚ ಈಶಾನೋ ಮಹಾದೇವೋ ಮಹತ್ತ್ವತಃ
'ಶಿವಃ ಸುಖಾತ್ಮಕತ್ವೇನ ಶರ್ವಃ ಶಂರೋಧನಾದ್ ಹರಿಃ'

ಎಂದು ಶಿವನ ನಾಮಗಳೆಲ್ಲವೂ ವಿಷ್ಣುವಿಗೆ ಅನ್ವಯಿಸುವವು ಎಂದು ಸಾರಿದರು. 'ಏಷ ಹಿ ಏವ ಶೂನ್ಯಃ' ಎಂದು ಅವನನ್ನು ಶೂನ್ಯನೆಂದೂ ಕರೆಯಬಹುದೆಂದರು. ವಸ್ತುತಃ ಎಲ್ಲ ನಾಮಗಳು ಪದಗಳೂ ಮುಖ್ಯವಾಗಿ 'ಸರ್ವೋತ್ತಮ' ಪರಮಾತ್ಮನನ್ನೇ ಬೋಧಿಸುವವು, ಅನಂತರದಲ್ಲಿಯೇ ಆಯಾ ದೇವತೆಗಳನ್ನೂ ವಸ್ತುಗಳನ್ನೂ ಬೋಧಿಸುವವು ಎಂದು ಸಾರಿದರು. ಆದುದರಿಂದ ಶ್ರೀ ಮಧ್ವಾಚಾರ್ಯರ ಪ್ರಧಾನ ಸಿದ್ಧಾಂತವಾದ 'ವಿಷ್ಣು-ಸರ್ವೋತ್ತಮತ್ವ' ಸಿದ್ಧಾಂತವನ್ನು ಈ ಹಿನ್ನೆಲೆಯಲ್ಲಿ ಅರ್ಥಮಾಡಿ ಕೊಳ್ಳಬೇಕು. ಶಿವ-ವಿಷ್ಣು ಸರ್ವೋತ್ತಮತ್ವದ ಪೌರಾಣಿಕ ವಿವಾದವೆಂದು ಗ್ರಹಿಸಬಾರದು. ಬ್ರಹ್ಮತತ್ತ್ವ ಮತ್ತು ವಿಷ್ಣುದೇವತೆ ಈ ಸಮನ್ವಯವು ಮತ್ತು ಅದರ ಸರ್ವೋತ್ತಮತ್ವ, ಸ್ವತಂತ್ರತ್ವ, ಸರ್ವಗುಣಪೂರ್ಣತ್ವವು ಅವರ ತತ್ತ್ವಜ್ಞಾನ ಮತ್ತು ಧರ್ಮಗಳ ಕೇಂದ್ರ ಬಿಂದುವು.

ಶ್ರೀಮಧ್ವಾಚಾರ್ಯರು ಉಡುಪಿಯಿಂದ ಏಳು ಮೈಲಿ ದೂರದಲ್ಲಿರುವ 'ಪಾಜಕ ಕ್ಷೇತ್ರ' ವೆಂಬ ಹಳ್ಳಿಯಲ್ಲಿ ಕ್ರಿ.ಶ. ೧೨೩೮ ರಲ್ಲಿ (ವಿಲಂಬಿ ಸಂವತ್ಸರ ಮಾಘಶುದ್ಧ ಸಪ್ತಮಿಯ ದಿನ) ಅವತರಿಸಿದರು. ಉಡುಪಿಯ ಅನಂತೇಶ್ವರ ದೇವಾಲಯದಲ್ಲಿ ವಾಸವಾಗಿದ್ದ ಅಚ್ಯುತಪ್ರೇಕ್ಷಾಚಾರ್ಯರಿಂದ ಸಂನ್ಯಾಸವನ್ನು ಪಡೆದರು. ಅವರಲ್ಲಿಯೇ ವಿದ್ಯಾಭ್ಯಾಸವನ್ನು ಮಾಡಿದರು. ಇವರ ಸಂನ್ಯಾಸನಾಮ ಆನಂದ ತೀರ್ಥರು. ಮುಂದೆ ಪೂರ್ಣಪ್ರಜ್ಞರು, ಮಧ್ವಾಚಾರ್ಯರು ಎಂಬ ಹೆಸರುಗಳಿಂದಲೂ ಪ್ರಸಿದ್ಧರಾದರು.

ಅಚ್ಯುತಪ್ರೇಕ್ಷರು ಏಕದಂಡೀ ಏಕಾಂತೀ ವೈಷ್ಣವ ಸಂಪ್ರದಾಯಕ್ಕೆ ಸೇರಿದವರಾಗಿದ್ದರು. ಇವರಿಂದ 'ಇಷ್ಟಸಿದ್ಧಿ' ಯೇ ಮೊದಲಾದ ಅದ್ವೈತ ಗ್ರಂಥಗಳನ್ನು ಕೇಳಿದಾಗ ಶ್ರೀಮಧ್ವಾಚಾರ್ಯರಿಗೆ ಆ ಸಿದ್ಧಾಂತವು ಅಸಮರ್ಪಕ ಎನಿಸಿತು. ಗುರು



ಗಳೊಡನೆ ವಾದಿಸತೊಡಗಿದರು. ವೇದೋಪನಿಷತ್ತುಗಳ ದ್ವೈತಪರವಾದ ಅರ್ಥವನ್ನು ವಿವರಿಸತೊಡಗಿದರು. ತಮ್ಮ ಸಿದ್ಧಾಂತವನ್ನು ಪ್ರಚುರಪಡಿಸಲು ದಕ್ಷಿಣ ಭಾರತದ ವಿದ್ವತ್ ಕೇಂದ್ರಗಳಾದ ಶ್ರೀರಂಗ, ರಾಮೇಶ್ವರ, ಕನ್ಯಾಕುಮಾರಿ ಮೊದಲಾದ ಸ್ಥಳಗಳಿಗೆ ಹೋದರು. ಬಳಿಕ ಉತ್ತರಭಾರತದ ಅನೇಕ ವಿದ್ಯಾಕೇಂದ್ರಗಳನ್ನು ಸಂದರ್ಶಿಸುತ್ತಾ ಬದರಿಕಾಶ್ರಮಕ್ಕೆ ಹೋದರು. ಅಲ್ಲಿ ತಮ್ಮ 'ಗೀತಾಭಾಷ್ಯ' ವನ್ನು ರಚಿಸಿ ಶ್ರೀ ವೇದವ್ಯಾಸರಿಗೆ ಸಮರ್ಪಿಸಿ ಮರುಪ್ರಯಾಣವನ್ನು ಕೈಕೊಂಡರು. ಮಾರ್ಗದಲ್ಲಿ ಗೋದಾವರೀ ತೀರದ ಪುಣತಾಂಬೆಯಲ್ಲಿ ಶೋಭನಭಟ್ಟ (ಆನಂದಭಟ್ಟ) ಎಂಬ ಘನ ವಿದ್ವಾಂಸರನ್ನು ವಾದದಲ್ಲಿ ಜಯಿಸಿ ಅವರನ್ನೂ ಅವರ ಶಿಷ್ಯರನ್ನೂ ತಮ್ಮ ಮತಕ್ಕೆ ಪರಿವರ್ತಿಸಿದರು. ಈ ಶೋಭನಭಟ್ಟರು ಕಾಕತೀಯ ರುದ್ರದೇವನ ರಾಜಗುರುಗಳಾಗಿದ್ದರು. ಶ್ರೀ ಮಧ್ವಾಚಾರ್ಯರಿಂದ ಸಂನ್ಯಾಸವನ್ನು ತೆಗೆದುಕೊಂಡು ಪದ್ಮನಾಭತೀರ್ಥರು ಎಂಬ ನಾಮದಿಂದ ಮುಂದೆ ಪ್ರಸಿದ್ಧರಾದರು. ಕಾಕತೀಯ ರಾಜರಲ್ಲಿದ್ದ ಹುಕ್ಕ-ಬುಕ್ಕರನ್ನು ಕಂಪಲಿಗೆ ಕಳಿಸಿ ಮುಂದೆ ವಿಜಯನಗರದ ಸಾಮ್ರಾಜ್ಯ ಸ್ಥಾಪನೆಗೆ ಪ್ರೇರೇಪಿಸಿದವರಲ್ಲಿ ಇವರೂ ಒಬ್ಬರು. ಶ್ರೀ ಮಧ್ವಾಚಾರ್ಯರು ಒರಿಸ್ಸಾದಲ್ಲಿದ್ದ ಶ್ಯಾಮಶಾಸ್ತ್ರಿಗಳೆಂಬ ಇನ್ನೊಬ್ಬ ವಿದ್ವಾಂಸರನ್ನೂ ತಮ್ಮ ಮತಕ್ಕೆ ಪರಿವರ್ತಿಸಿದರು. ಇವರು ಮುಂದೆ ಕೆಲಕಾಲ ಕಲಿಂಗ ದೇಶದ ರಾಜ್ಯಭಾರವನ್ನು ನಿರ್ವಹಿಸಿದರು. ಶ್ರೀ ಕೂರ್ಮದಲ್ಲಿ ಇವರ ಶಾಸನಗಳಿವೆ. ಹೀಗೆ ಅನೇಕ ವಿದ್ವಾಂಸರನ್ನು ತಮ್ಮ ಮತಕ್ಕೆ ಪರಿವರ್ತಿಸಿ ಶ್ರೀ ಮಧ್ವಾಚಾರ್ಯರು ಉಡುಪಿಗೆ ಮರಳಿದರು. ಅಲ್ಲಿ ಬ್ರಹ್ಮಸೂತ್ರ ಮತ್ತು ಉಪನಿಷತ್ತುಗಳಿಗೆ ಭಾಷ್ಯಗಳನ್ನು ಬರೆದರು. ಶ್ರೀ ಶಂಕರಾಚಾರ್ಯರು ಉಪನಿಷತ್ತುಗಳು, ಬ್ರಹ್ಮಸೂತ್ರ ಮತ್ತು ಗೀತೆ ಎಂಬ ವೇದಾಂತದ ಪ್ರಸ್ಥಾನತ್ರಯಕ್ಕೆ ಭಾಷ್ಯಗಳನ್ನು ಬರೆದು ಅದ್ವೈತ ಮತವನ್ನು ಪ್ರತಿಪಾದಿಸಿದರು. ಬ್ರಹ್ಮನು ನಿರ್ಗುಣ, ನಿರಾಕಾರ, ಜಗತ್ತೆಲ್ಲ ಮಾಯೆ ಎಂಬ ಅವರ ನಿರ್ಗುಣವಾದವೂ ಮಾಯಾವಾದವೂ ಶ್ರೀ ಮಧ್ವಾಚಾರ್ಯರಿಗೆ ಸಮ್ಮತವಾಗಲಿಲ್ಲ. ಇದು ಶ್ರುತಿ-ಸೂತ್ರಗಳ ಅಭಿಪ್ರಾಯವಲ್ಲ ಎಂದು ಅವರಿಗನಿಸಿತು. ಆದುದರಿಂದ ತಾವು ವೇದಾಂತ ಪ್ರಸ್ಥಾನತ್ರಯಕ್ಕೆ ಬೇರೆ ಭಾಷ್ಯ ಬರೆದು ಬ್ರಹ್ಮನು ಗುಣಪೂರ್ಣ, ಜಗತ್ತು ಸತ್ಯ ಎಂದು ಪ್ರತಿಪಾದಿಸಿದರು. ಎರಡನೆಯ ಸಲ ಉತ್ತರ ಭಾರತದ ಯಾತ್ರೆಯನ್ನು ಕೈಕೊಂಡು ಮತ್ತೊಮ್ಮೆ ಬದರಿಕಾಶ್ರಮಕ್ಕೆ ಹೋಗಿ ಬಂದರು. ಅಸ್ಸಾಂ, ಸೌರಾಷ್ಟ್ರಗಳಂಥ ಪೂರ್ವ-ಪಶ್ಚಿಮದ ಮೂಲೆಯ ಪ್ರಾಂತಗಳಿಗೂ ಹೋಗಿ ಮತ ಪ್ರಚಾರವನ್ನು ಮಾಡಿದರು. ಇವರು ೩೭ ಗ್ರಂಥಗಳನ್ನು ರಚಿಸಿರುವರು. ಅವುಗಳನ್ನು ಹೀಗೆ ವಿಂಗಡಿಸಬಹುದು:—

೧) ಋಗ್ಭಾಷ್ಯ, ಉಪನಿಷದ್ಭಾಷ್ಯಗಳು, ಬ್ರಹ್ಮಸೂತ್ರಭಾಷ್ಯ, ಅನುವ್ಯಾಖ್ಯಾನಾದಿ ಸೂತ್ರವ್ಯಾಖ್ಯಾನಗಳು, ಗೀತಾಭಾಷ್ಯ(೧೭ ಗ್ರಂಥಗಳು).

೨) ಮಹಾಭಾರತತಾತ್ಪರ್ಯನಿರ್ಣಯ, ಭಾಗವತತಾತ್ಪರ್ಯನಿರ್ಣಯ, ತಂತ್ರಸಾರ ಇತ್ಯಾದಿ ಸ್ತೋತ್ರ ಪೂಜಾದಿ ಗ್ರಂಥಗಳು (೧೦ ಗ್ರಂಥಗಳು),

೩) ದಶಪ್ರಕರಣಗಳು (೧೦ ಗ್ರಂಥಗಳು.

ಅವರ ಈ ಗ್ರಂಥದ ಯೋಜನೆಯನ್ನು ನೋಡಿದರೆ ವೈದಿಕ ಧರ್ಮದ ಆಧ್ಯಾತ್ಮಿಕ ಆಕರಗ್ರಂಥಗಳ ಸಾರವನ್ನೆಲ್ಲ ಒದಗಿಸುವದು ಅವರ ಉದ್ದೇಶವೆಂಬುದು ಸ್ಪಷ್ಟವಾಗುವುದು. ಪೂರ್ವಮೀಮಾಂಸಕರೂ, ಅದ್ವೈತಿಗಳೂ ಋಗ್ವೇದಕ್ಕೆ ಕೇವಲ ಕರ್ಮಪರವಾದ ಅರ್ಥವನ್ನು ಮಾಡುವರು. ಅದರ ಆಧ್ಯಾತ್ಮಿಕ ಅರ್ಥವನ್ನು ಗಮನಿಸುವದಿಲ್ಲ. ಆದರೆ ಶ್ರೀ ಮಧ್ವಾಚಾರ್ಯರು ತಮ್ಮ ಋಗ್‌ಭಾಷ್ಯದಲ್ಲಿ ವೇದಮಂತ್ರಗಳ ಆಧ್ಯಾತ್ಮಿಕ ಅರ್ಥವನ್ನು ವಿವರಿಸಿದರು. ಉಪನಿಷದ್‌ಭಾಷ್ಯಗಳಲ್ಲಿ 'ತತ್ತ್ವಮಸಿ', 'ಅಹಂ ಬ್ರಹ್ಮಾಸ್ಮಿ', 'ಏಕಮೇವಾದ್ವಿತೀಯಂ ಬ್ರಹ್ಮ', 'ನೇಹ ನಾನಾಸ್ತಿ ಕಿಂಚನ", ಇತ್ಯಾದಿ ಶ್ರುತಿವಾಕ್ಯಗಳು ಅದ್ವೈತವನ್ನು ಬೋಧಿಸುವದಿಲ್ಲ ಎಂದು ಸ್ಪಷ್ಟಪಡಿಸಿದರು. 'ತತ್‌ತ್ವಮಸಿ" ಎಂಬ ವಾಕ್ಯವು ನೀನು (ಜೀವನು) ಬ್ರಹ್ಮನಿಗೆ ಅಧೀನನಾಗಿರುವಿ. ಅವನಿಗೆ ಸದೃಶನಾಗಿರುವಿ, ಅಂದರೆ ಸತ್-ಚಿತ್ ಸ್ವರೂಪನಾಗಿರುವಿ ಎಂದು ಬೋಧಿಸುವದೇ ಹೊರತು ಅವನ ಹೊರತಾಗಿ ನೀನು (ಜೀವನು) ಇಲ್ಲವೇ ಇಲ್ಲ ಎಂದು ಬೋಧಿಸುವದಿಲ್ಲ. ಅಲ್ಲಿ ಕೊಟ್ಟಿರುವ ಒಂಬತ್ತು ದೃಷ್ಟಾಂತಗಳೂ ಬ್ರಹ್ಮನಿಗಿಂತ ಭಿನ್ನವಾದ ಆದರೆ ಅವನಿಗೆ ಅಧೀನನಾದ ಜೀವನಿರುವನೆಂದೇ ಬೋಧಿಸುವವು. ಇದರಂತೆಯೇ 'ಅಹಂ ಬ್ರಹ್ಮಾಸ್ಮಿ" ಎಂಬಲ್ಲಿಯೂ ನಾನೂ (ಜೀವನು) ಬ್ರಹ್ಮನಿಗೆ ಸದೃಶನಾಗಿರುವೆನೆಂದು ಅರ್ಥವು. 'ಅಗ್ನಿಃಮಾಣವಕಃ' 'ಸಿಂಹೋ ಮಾಣವಕಃ"-ಹುಡುಗನು ಬೆಂಕಿಯಾಗಿರುವನು, ಹುಡುಗನು ಸಿಂಹನಾಗಿರುವನು. ಎಂಬ ಪ್ರಯೋಗಗಳಲ್ಲಿ ಹುಡುಗನು ಬೆಂಕಿಯಂತೆ ತೇಜಸ್ವಿಯೂ ಸಿಂಹದಂತೆ ಪರಾಕ್ರಮಿಯೂ ಆಗಿರುವನೆಂದು ಅರ್ಥವು. ಬೆಂಕಿಯನ್ನು ಬಿಟ್ಟು ಹುಡುಗನೇ ಇಲ್ಲ, ಸಿಂಹ ಹೊರತಾಗಿ ಹುಡುಗನೇ ಇಲ್ಲ ಎಂದು ಅರ್ಥವಲ್ಲ 'ಏಕಮೇವಾದ್ವಿತೀಯಮ್' ಎಂದರೆ ಸ್ವಾತಂತ್ರ್ಯ ಸರ್ವಜ್ಞತ್ವಾದಿ ವಿಷಯಗಳಲ್ಲಿ ಬ್ರಹ್ಮನಿಗೆ ಸಮಾನರು ಅಥವಾ ಉತ್ತಮರು ಯಾರೂ ಇಲ್ಲವೆಂದೇ ಅರ್ಥ. ಬ್ರಹ್ಮನ ಹೊರತಾಗಿ ಬೇರೆ ಯಾವ ವಸ್ತುವೂ ಇಲ್ಲವೇ ಇಲ್ಲ ಎಂದರ್ಥವಲ್ಲ ಇತ್ಯಾದಿಯಾಗಿ ಅದ್ವೈತಪರವೆಂದು ತೋರುವ ವಾಕ್ಯಗಳ ಸರಿಯಾದ ಅರ್ಥವನ್ನು ವಿವರಿಸುವರು. ಗೀತಾಭಾಷ್ಯದಲ್ಲಿ ಜ್ಞಾನ-ಕರ್ಮಗಳಿಗೆ ವಿರೋಧವಿಲ್ಲ. ಕರ್ಮದ ಸರ್ವಥಾ ಪರಿತ್ಯಾಗವು ಉಚಿತವಲ್ಲ. ಜ್ಞಾನಿಗಳೂ ಕರ್ಮಮಾಡಬೇಕು. ಫಲಾಪೇಕ್ಷೆಯಿಲ್ಲದೆ. ಭಗವದರ್ಪಣಬುದ್ಧಿಯಿಂದ ವಿಹಿತ ಕರ್ಮಗಳನ್ನು ಮಾಡುವದೇ ಕರ್ಮಯೋಗವು. ಇಂಥ ನಿಷ್ಕಾಮಕರ್ಮಾನುಷ್ಠಾನವು ಜ್ಞಾನಕ್ಕೂ ಭಕ್ತಿಗೂ ಸಹಾಯಕವಾಗುವುದು. ಜ್ಞಾನಿಗಳಿಗೂ ಮುಕ್ತರಿಗೂ ಜ್ಞಾನಾಭಿವೃದ್ಧಿಗೂ ಸಹಾಯಕವಾಗುವುದು ಎಂದು ಕರ್ಮಯೋಗದ ಹೊಸ ಸ್ವರೂಪವನ್ನು ವಿವರಿಸಿರುವರು. ಬ್ರಹ್ಮಸೂತ್ರ ಭಾಷ್ಯದಲ್ಲಿ ಗುಣಪೂರ್ಣ ಬ್ರಹ್ಮನ ಸ್ವರೂಪವನ್ನೂ ಅವನ ಅಪರೋಕ್ಷಜ್ಞಾನದ ಸಾಧನಗಳನ್ನೂ ಅದರ ಫಲವನ್ನೂ ವಿವರಿಸಿರುವರು. ಬ್ರಹ್ಮಸೂತ್ರಗಳಿಗೆ ಅವರು ಬರೆದ ಅನುವ್ಯಾಖ್ಯಾನವೆಂಬ ಇನ್ನೊಂದು . ವ್ಯಾಖ್ಯಾನ ಗ್ರಂಥವು ಅಪೂರ್ವವಾದ ವಾದಗ್ರಂಥವು, ಎರಡು ಸಾವಿರ ಶ್ಲೋಕಗಳಿರುವ ಈ ಗ್ರಂಥದಲ್ಲಿ ಭಾರತೀಯ ತತ್ತ್ವಜ್ಞಾನದ ಎಲ್ಲಾ ಪ್ರಧಾನ ಸಮಸ್ಯೆಗಳನ್ನೂ ವಿಮರ್ಶಿಸಿರುವರು. ಪ್ರಮಾಣಗಳ ಸ್ವರೂಪ, ಖ್ಯಾತಿವಾದ, ಕಾರ್ಯತಾವಾದ' ಅಜ್ಞಾನ ಸ್ವರೂಪ, ಕಾರ್ಯ-ಕಾರಣ ವಿಚಾರ ಇತ್ಯಾದಿ ಪ್ರಮುಖ ದಾರ್ಶನಿಕರ ಅಭಿಪ್ರಾಯಗಳನ್ನು ವಿಮರ್ಶಾತ್ಮಕವಾಗಿ ಪರಿಶೀಲಿಸಿರುವರು.

ಶ್ರೀ ಮಧ್ವಾಚಾರ್ಯರ ಮಹಾಭಾರತ ತಾತ್ಪರ್ಯನಿರ್ಣಯ ಒಂದು ಅಪೂರ್ವವಾದ ಗ್ರಂಥ. ತಾವು ಎರಡು ಸಲ ಭಾರತದ ಯಾತ್ರೆಯನ್ನು ಕೈಕೊಂಡಾಗ ಮಹಾಭಾರತದ ಅನೇಕ ಹಸ್ತಪ್ರತಿಗಳನ್ನು ಸಂಗ್ರಹಿಸಿ ಮಹಾಭಾರತದ ಶುದ್ಧಪಾಠವನ್ನು ನಿರ್ಣಯಿಸಿ ಅವರ ಸಾರಸಂಗ್ರಹರೂಪವಾದ ಈ ಗ್ರಂಥವನ್ನು ಬರೆದಿರುವರು.

ಕ್ವಚಿದ್‌ಗ್ರಂಥಾನ್ ಪ್ರಕ್ಷಿಪಂತಿ ಕ್ವಚಿದಂತರಿತಾನಪಿ ।
ಕುರ್ಯುಃ ಕ್ವಚಿಚ್ಚ ವ್ಯತ್ಯಾಸಂ ಪ್ರಮಾದಾತ್ ಕ್ವಚಿದನ್ಯಥಾ ॥

ಎಂದು ಗ್ರಂಥಗಳು ಕಲುಷಿತವಾಗಬಹುದಾದ ರೀತಿಗಳನ್ನು ವಿವರಿಸಿರುವರು.

'ದೇಶೇ ದೇಶೇ ತಥಾ ಗ್ರಂಥಾನ್ ದೃಷ್ಟ್ವಾಚೈತ ಪೃಥಗ್ವಿಧಾನ್ ।'

ಎಂದು ತಾವು ಅನೇಕ ಹಸ್ತಪ್ರತಿಗಳನ್ನು ಪರಿಶೀಲಿಸುವುದನ್ನು ವಿವರಿಸಿರುವರು. ಅವರ ಈ ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ಅನೇಕ ಧರ್ಮಸೂಕ್ಷ್ಮದ ಪ್ರಸಂಗಗಳನ್ನು ವಿಶ್ಲೇಷಿಸಿ ನಿರ್ಣಯಗಳನ್ನು ಒದಗಿಸಿರುವರು. ಭಾಗವತತಾತ್ಪರ್ಯನಿರ್ಣಯದಲ್ಲಿ ಭಾಗವತದಲ್ಲಿಯ ಆಧ್ಯಾತ್ಮಿಕಶ್ಲೋಕಗಳನ್ನು ಸಂಗ್ರಹಿಸಿರುವುರು. ತಂತ್ರಸಾರವು ಮೂರ್ತಿಶಿಲ್ಪ, ಪೂಜಾಕ್ರಮ, ಬೀಜಾಕ್ಷರಜಪ ಇತ್ಯಾದಿಗಳನ್ನು ವಿವರಿಸುವುದು.

ತತ್ವಸಂಖ್ಯಾನ, ತತ್ವವಿವೇಕ, ಖಂಡನತ್ರಯ ಇತ್ಯಾದಿಯಾದ ದಶಪ್ರಕರಣಗಳು ವೇದಾಂತದ ವಿವಿಧ ವಿಷಯಗಳನ್ನು ನಿರೂಪಿಸುವ ಪ್ರಕರಣಗ್ರಂಥಗಳು.

ಶ್ರೀ ಮಧ್ವಾಚಾರ್ಯರು ತತ್ವಗಳನ್ನು ಸ್ವತಂತ್ರ ಮತ್ತು ಪರತಂತ್ರ ಎಂದು

ವಿಂಗಡಿಸಿ ಪರಮಾತ್ಮನೊಬ್ಬನೇ ಸ್ವತಂತ್ರತತ್ವ, ಜೀವ ಜಗತ್ತುಗತ್ತುಗಳು ಪರತಂತ್ರ ಅಂದರೆ ಪರಮಾತ್ಮತಂತ್ರ ತತ್ವಗಳು ಎಂದು ಹೇಳಿದ್ದರಿಂದ ಈ ಮತಕ್ಕೆ ದ್ವೈತವೆಂಬ ಹೆಸರು ಬಂದಿತು. ಜೀವ, ಜಡ, ಪರಮಾತ್ಮರಲ್ಲಿ ಪಂಚವಿಧವಾದ ಬೇದವನ್ನು ಪ್ರತಿಪಾದಿಸಿದ್ದರಿಂದಲೂ ಈ ಮತಕ್ಕೆ ದ್ವೈತವೆಂಬ ಹೆಸರು ಬಂದಿತು. ಅದ್ವೈತಮತದಲ್ಲಿ 'ಬ್ರಹ್ಮ' ಒಂದೇ ತತ್ವವನ್ನು ಒಪ್ಪಿ ಉಳಿದುದೆಲ್ಲ ಮಾಯೆಯೆಂದು ಹೇಳಿದ್ದರಿಂದ ಅದು ಅದ್ವೈತ ಅಥವಾ ಬ್ರಹ್ಮಾದ್ವೈತವೆನಿಸಿತು. ಅವರಲ್ಲಿ ಎರಡು ಸತ್ಯವಾದ ತತ್ವಗಳೇ ಇಲ್ಲದ್ದರಿಂದ ಭೇದವೆಲ್ಲ ಮಾಯಿಕವಾಗಿ ಅಭೇದವೇ ಉಳಿಯಿತು. ಈ ಎರಡನ್ನೂ ಬಲವಾಗಿ ವಿರೋಧಿಸಿದ್ದರಿಂದ 'ದ್ವೈತ' ಮತವು ದ್ವೈತವಾಯಿತು. ಆದುದರಿಂದ ಒಂದಕ್ಕಿಂತ ಹೆಚ್ಚು ತತ್ವಗಳನ್ನು ಸತ್ಯವೆಂದು ಒಪ್ಪುವುದೂ ಈ ತತ್ತ್ವಗಳಲ್ಲಿ ಬೇಧವನ್ನು ಒಪ್ಪುವುದೂ ದ್ವೈತಮತದ ವೈಶಿಷ್ಟ್ಯವು.

ವೇದಾಂತಶಾಸ್ತ್ರವು ತಾನು ಹೇಳುವ ಎಲ್ಲ ತತ್ತ್ವಗಳನ್ನೂ ಶೃತಿಯ ಆಧಾರದಿಂದ ಮೊದಲು ಹೇಳಿ ಬಳಿಕ ಅದನ್ನು ಯುಕ್ತಿಯಿಂದ ಸಮರ್ಥಿಸುವುದು. ಜಗತ್ತು 'ಸತ್ಯ' ವೆಂಬುದನ್ನು ಶೃತಿಯಲ್ಲಿ ಸ್ಪಷ್ಟವಾಗಿ ಅನೇಕ ಕಡೆಗೆ ಹೇಳಲಾಗಿದೆ.

೧) ಯಾಥಾತಥ್ಯತೋ ಅರ್ಥಾನ್ ವ್ಯದಧಾತ್ ಶಾಶ್ವತೀಭ್ಯಃ ಸಮಾಭ್ಯಃ (ಈಶ). ೨) ವಿಶ್ವಂ ಸತ್ಯಂ ಮಘವಾನಾ(ಋ ೨.೨೪.೧೨) ೩) ಯಚ್ಚಿಕೇತ ಸತ್ಯಮಿತ್ (ಋ). ೪) ಯತ್ ಸತ್ಯರೂಪಂ ಜಗದೇತದೀದೃಕ್ ಸೃಷ್ಟಾತು ಅಭೂತ್ ಸತ್ಯ ಕರ್ಮಾ ಮಹಾತ್ಮಾ-ಇತ್ಯಾದಿಯಾಗಿ ಅನೇಕ ಶೃತಿಗಳಲ್ಲಿ ಜಗತ್ತು 'ಸತ್ಯ' ವೆಂಬುದು ಪ್ರತ್ಯಕ್ಷಸಿದ್ಧವೂ ಆಗಿದೆ. ಜಗತ್ತು ಅಜ್ಞಾನದಿಂದ ಉಂಟಾಗಿದೆ, ಅದೊಂದು ಭ್ರಮೆ ಎಂಬ ವಾದವನ್ನು ದ್ವೈತವು ಒಪ್ಪುವುದಿಲ್ಲ. ಒಂದು ವಸ್ತುವನ್ನು ಇನ್ನೊಂದು ವಸ್ತುವಿನ ಭ್ರಮೆಯಾಗಬೇಕಾದರೆ ಅವೆರಡೂ ಎಲ್ಲಿಯೊ ಾದರೂ ಇರಬೇಕು. ಎಲ್ಲಿಯೂ ಇಲ್ಲದಿರುವ ವಸ್ತುವಿನ ಭ್ರಮೆ ಬರುವುದು ಸಾಧ್ಯವಿಲ್ಲ. ರಜ್ಜುವನ್ನು ಸರ್ಪವೆಂದು ಭ್ರಮಿಸಬೇಕಾದರೆ ಆ ವ್ಯಕ್ತಿಯು ಸರ್ಪವನ್ನು ಮೊದಲು ನೋಡಿರಬೇಕು. ಎಲ್ಲಿಯೂ ಇಲ್ಲದ, ಎಂದೂ ಕಾಣದ ಸರ್ಪದ ಭ್ರಮೆಯುಂಟಾಗಲು ಸಾಧ್ಯವಿಲ್ಲ. ಬ್ರಹ್ಮಾತಿರಿಕ್ತವಾದ ಜಗತ್ತೇ ಎಲ್ಲಿಯೂ ಯಾವಾಗಲೂ ಇಲ್ಲವೆಂದರೆ ಅಂಥ ಜಗತ್ತು ಇದ್ದಂತೆ ಭ್ರಮೆಯುಂಟಾಗುವುದಾದರೂ ಹೇಗೆ ? ಅಲ್ಲದೆ ಇಂಥ ಮಾಯಾಮಯ ಜಗತ್ತನ್ನು ಸೃಷ್ಟಿಸುವವನಾದರೆ ಅವನೆಂಥ ಸೃಷ್ಟಿಕರ್ತ ! ಎಂಬುದು ದ್ವೈತಿಗಳ ವಾದ.

ಜೀವರೂ ಕೂಡ ಬ್ರಹ್ಮಭಿನ್ನರು ಮತ್ತು ಸತ್ಯರು. ಬ್ರಹ್ಮನೇ ಆ ವಿದ್ಯೆಯಿಂದ ಜೀವರೂಪವನ್ನು ತಾಳಿದನು ಎಂದು ಹೇಳುವುದು ಸರಿಯಲ್ಲ. ಜೀವರು ಬ್ರಹ್ಮನ ಪ್ರತಿಬಿಂಬರು, ಬ್ರಹ್ಮನೇ ಅಲ್ಲ. ಪ್ರತಿಬಿಂಬ ಅಂದರೆ ಅವನಿಗೆ ಸದೃಶರು



ಮತ್ತು ಅವನ ಅಧೀನರು. ಬ್ರಹ್ಮನು ಸತ್-ಚಿತ್-ಆನಂದರೂಪನು ಜೀವರೂ ಸತ್-ಚಿತ್-ಆನಂದರೂಪರು. ಆದರೆ ಜೀವರ ಈ ಸ್ವರೂಪ ಬ್ರಹ್ಮನಿಗೆ ಅಧೀನ, ಕಿಂಚತ್ ಸದೃಶ, ಜೀವರ ಸ್ವರೂಪ, ಸತ್ತಾ, ಪ್ರವೃತ್ತಿ, ಪ್ರಮಿತಿ ಎಲ್ಲವೂ ಬ್ರಹ್ಮನಿಗೆ ಅಧೀನ ಹೀಗೆ ಅಧೀನವಾಗಿಯೂ ಸದೃಶವಾಗಿಯೂ ಇರುವುದೇ ಪ್ರತಿಬಿಂಬತ್ವವು. ಜೀವರು ಅಣುಸ್ವರೂಪರು. ಅವರಿಗೆ ಕರ್ತೃತ್ವ, ಭೋಕ್ತೃತ್ವಗಳು ಇರುವವು. ಸಾಂಖ್ಯ ಪುರುಷರಂತೆ ನಿರ್ಲಿಪ್ತರಲ್ಲ. ಜೀವರಲ್ಲಿ ಸಾತ್ತ್ವಿಕ, ರಾಜಸ, ತಾಮಸ ಎಂಬ ಸ್ವರೂಪ ಭೇದವನ್ನು ಒಪ್ಪುವರು. ಈ ವರ್ಗೀಕರಣವನ್ನು ಶೃತಿ ಸ್ಮೃತಿ-ಪ್ರಮಾಣಗಳಿಂದಲೂ ಅನುಭವದಿಂದಲೂ ಸಮರ್ಥಿಸುವರು. ಎಲ್ಲರೂ ಸಾತ್ತ್ವಿಕರೆಂದು ಹೇಳಬೇಕಾದುದೇನೋ ಮೆಚ್ಚಿಗೆಯಾಗುವ ಪಕ್ಷ. ಆದರೆ ಲೋಕ ಸ್ವಭಾವ ವಿಶ್ಲೇಶಣೆಯು ಇದನ್ನು ಸಮರ್ಥಿಸುವುದಿಲ್ಲ. ಶಾಸ್ತ್ರವೂ ಸಮರ್ಥಿಸುವುದಿಲ್ಲ. ಆದರೆ ತಾತ್ತ್ವಿಕವಾಗಿ ಈ ಸ್ವರೂಪಭೇದವನ್ನು ಒಪ್ಪಿದ ಮಾತ್ರದಿಂದ ವೈಯಕ್ತಿಕ ರಾಗದ್ವೇಷಗಳಿಂದ ವ್ಯಕ್ತಿಗಳನ್ನು ಸಾತ್ತ್ವಿಕ-ರಾಜಸ-ತಾಮಸರೆಂದು ನಮ್ಮ ಇಷ್ಟಬಂದಂತೆ ವರ್ಣಿಸುವುದು ಶಾಸ್ತ್ರಸಮ್ಮತವೂ ಅಲ್ಲ, ಲೋಕ ಸಮ್ಮತವೂ ಅಲ್ಲ. ಇಂದು ನಿಷ್ಠುರವಾದಿಯಾದ ವ್ಯಕ್ತಿಯು ಸ್ವರೂಪತಃ ರಾಜಸನಾಗಿರದೆ ಸಾತ್ತ್ವಿಕನಾಗಿರಬಹುನು, ಇಂದು ಸೌಮ್ಯನಂತೆ ಕಾಣುವವನು ಶ್ವರೂಪತಃ ತಾಮಸನೇ ಆಗಿರಬಹುದು. ಆದುದರಿಂದ ಪ್ರತ್ಯಕ್ಷ ವ್ಯವಹಾರದಲ್ಲಿ ಎಲ್ಲರೂ ಸಾತ್ತ್ವಿಕತೆಯ ಕಡೆಗೇ ಪ್ರವೃತ್ತರಾದರೆ, ಸಾತ್ತ್ವಿಕರೆಂದು ಗ್ರಹಿಸಿಯೇ ವ್ಯವಹರಿಸತೊಡಗಿದರೆ ಗಟ್ಟಿ-ಜೊಳ್ಳು ಕಾಳುಗಳ ವಿಂಗಡಣೆ ತಾನಾಗಿಯೇ ಆಗುವುದು. ಆಧ್ಯಾತ್ಮಿಕ ಉನ್ನತಿಯ ಪ್ರಯತ್ನದಲ್ಲಿಯೂ ಇದೇ ಮಾತು ಅನ್ವಯಿಸುವುದು. ನಮ್ಮ ನಮ್ಮ ಸ್ವರೂಪವನ್ನು ನಾವಾಗಿಯೇ ರಾಜಸ, ತಾಮಸ ಎಂದು ಹೀಯಾಳಿಸಿಕೊಳ್ಳದೇ ಆಧ್ಯಾತ್ಮಿಕ ಉನ್ನತಿಯ ಕಡೆಗೆ ಪ್ರವೃತ್ತರಾದರೆ, ಅಲ್ಲದ ಜೀವ ಸಲ್ಲದೇ ಇರುವುದು ತಾನಾಗಿಯೇ ಪ್ರಕಟವಾಗುವುದು. ಆದುದರಿಂದ ಸತ್-ಪ್ರವೃತ್ತಿ, ದುಷ್ಟ ಪ್ರವೃತ್ತಿಗಳಿಗೆ ತಾತ್ವಿಕ ವರ್ಗೀಕರಣದ ಭಯವನ್ನು ಇಟ್ಟುಕೊಳ್ಳದೇ, ಅಥವಾ ಅದನ್ನು ದೂಷಿಸದೆ ಮುಂದುವರೆಯಲು ಯಾವ ಆತಂಕವೂ ಇಲ್ಲ.

ಬ್ರಹ್ಮನೂ ಸತ್ಯ, ಜೀವರೂ ಸತ್ಯ, ಜಗತ್ತೂ ಸತ್ಯ ಎಂದಾದ ಮೇಲೆ ಅವರು ಪರಸ್ಪರ ಭಿನ್ನಸ್ವರೂಪ ಸ್ವಭಾವದವರೆಂದಾದ ಮೇಲೆ ಅವರಲ್ಲಿ ಸತ್ಯವಾದ ಭೇದವಿರುವುದು ಕ್ರಮಪ್ರಾಪ್ತ. ಈ ಭೇದವನ್ನು ೧] ಜೀವ ಜೀವಭೇದ ೨] ಜೀವ ಜಡಭೇದ ೩)ಜಡ-ಜಡಭೇದ ೪] ಜೀವ-ಪರಮಾತ್ಮ ಭೇದ ೫] ಜಡ-ಪರಮಾತ್ಮ ಭೇದ ಎಂದು ಪಂಚ ಭೇದಗಳನ್ನಾಗಿ ದ್ವೈತಿಗಳು ವಿವರಿಸುತ್ತಾರೆ. 'ಭಿನ್ನಾಶ್ಚ ಭಿನ್ನಧರ್ಮಾಶ್ಚ ಪದಾರ್ಥಾ ನಿಖಿಲಾ ಅಪಿ' ಎಂಬುದು ಅವರ ಸ್ಪಷ್ಟ ವಾದನಿಲುವು.

ಹೀಗೆ ಪರಮಾತ್ಮನ ಪ್ರತಿಬಿಂಬರೂ, ಪರಮಾತ್ಮಭಿನ್ನರೂ ಆದ ಜೀವರು ಅವಿದ್ಯಾ, ಪ್ರಕೃತಿ, ಕಾಮುಕರ್ಮಗಳ ಬಂಧನದಿಂದ ಸಂಸಾರದಲ್ಲಿ ಬಿದ್ದು ಜನ್ಮ, ಮರಣ, ಜರಾ ವ್ಯಾಧಿ ದುಃಖದಿಂದ ಬಳಲುವರು. ಅವಿದ್ಯೆಯಿಂದ ಪರಮಾತ್ಮನ ಸ್ವರೂಪವೂ ಜೀವನ ನಿಜಸ್ವರೂಪವೂ ಮರೆಯಾಗಿರುವುದು. ಪ್ರಕೃತಿಯಿಂದ ಸೂಕ್ಷ್ಮ ಮತ್ತು ಸ್ಥೂಲ ಶರೀರಗಳು ಬಂದಿರುವವು. ಕಾಮುಕರ್ಮಗಳಿಂದ ಮತ್ತೆ ಮತ್ತೆ ಜನ್ಮ-ಮರಣಗಳು ಬರುವಂತೆ ಪಾಪ-ಪುಣ್ಯಗಳ ಸಂಗ್ರಹವಾಗುವುದು. ಇದರಿಂದ ದಾಟಲು ಪರಮಾತ್ಮನ ಅಪರೋಕ್ಷ ಜ್ಞಾನ ಮತ್ತು ಪ್ರಸಾದ ಅಗತ್ಯ. ಅದನ್ನು ಸಂಪಾದಿಸಲು ವಿಹಿತ ಕರ್ಮಾನುಷ್ಠಾನ, ಭಕ್ತಿ ಅವಶ್ಯಕ. ಭಕ್ತಿಯು ಕೇವಲ ಮೂಢಭಕ್ತಿಯಲ್ಲ. ಪರಮಾತ್ಮನ ಮಹಾತ್ಮ್ಯವನ್ನು ತಿಳಿದುಕೊಂಡು ಅವನಲ್ಲಿ ಪರಮ ಸ್ನೇಹವನ್ನು ಮಾಡುವುದೇ ಭಕ್ತಿಯು.

ಪರಮಾತ್ಮನ ಸೇವೆಯು ಅಂಕನ, ನಾಮಕರಣ, ಭಜನ ಎಂದು ಮೂರು ವಿಧವಾಗಿದೆ. ದ್ವಾದಶ ನಾಮಗಳನ್ನೂ ಶಂಖಚಕ್ರಾದಿ ಮುದ್ರೆಗಳನ್ನೂ ಹಾಕಿಕೊಳ್ಳುವದೇ ಅಂಕನವು. ಪರಮಾತ್ಮನ ಹೆಸರುಗಳನ್ನು ಮಕ್ಕಳು ಮೊಮ್ಮಕ್ಕಳಿಗೆ ಇಡುವುದೇ ನಾಮಕರಣವು. ಭಜನವು ಹತ್ತು ಪ್ರಕಾರದ್ದಿರುವದು.

೧] ಸತ್ಯಮಾತನಾಡುವದು. ೨) ಹಿತಕರವಾದ ಮಾತನಾಡುವದು. ೩) ಪ್ರಿಯವಾದ ಮಾತನಾಡುವದು. ೪] ಆಧ್ಯಾತ್ಮಿಕ ಸಾಹಿತ್ಯವನ್ನು ಓದುವದು. ಇವು ನಾಲ್ಕು ವಾಣಿಯಿಂದ ಮಾಡುವ ಭಜನೆಗಳು. ೫) ದಾನ ಧರ್ಮ ಮಾಡುವದು. ೬] ಆಪತ್ತಿಗೆ ಒಳಗಾದವರಿಗೆ ಸಹಾಯ ಮಾಡುವದು. ೭] ಅನಾಥರಿಗೆ ಸಹಾಯ ಮಾಡುವದು. ಇವು ಮೂರು ಶರೀರದಿಂದ ಮಾಡುವ ಭಜನಗಳು. ೮) ದಯೆಯನ್ನು ಮಾಡುವದು. ೯) ಸತ್ಕರ್ಮಗಳನ್ನೇ ಮಾಡಲು ಇಚ್ಛಿಸುವದು. ೧೦] ಸತ್-ಶಾಸ್ತ್ರದಲ್ಲಿ ವಿಶ್ವಾಸವನ್ನಿಡುವದು. ಇವು ಮೂರು ಮಾನಸಿಕ ಭಜನಗಳು. ಹೀಗೆ ಹತ್ತು ವಿಧವಾದ ಭಜನಗಳನ್ನು ಮಾಡಿ ಪರಮಾತ್ಮನ ಸೇವೆಯನ್ನು ಮಾಡುತ್ತಾ ಅವನಲ್ಲಿ ಭಕ್ತಿಯನ್ನು ಮಾಡಿ ಅವನ ಅಪರೋಕ್ಷ ಜ್ಞಾನವನ್ನು ಪಡೆದು ಅವನ ಪ್ರಸಾದದಿಂದ ಮುಕ್ತಿಯನ್ನು ಪಡೆಯಬೇಕು. ಮುಕ್ತಿಯಲ್ಲಿ ಜೀವನು ಆತ್ಮೈಕ್ಯವನ್ನು ಪಡೆಯುವುದಿಲ್ಲ. ಅವನಿಂದ ಭಿನ್ನವಾಗಿಯೇ ಇದ್ದು, ಪ್ರಾಕೃತ ದೇಹವಿಲ್ಲದೆ, ಸ್ವರೂಪ ದೇಹೇಂದ್ರಿಯಗಳಿಂದ ಆನಂದವನ್ನು ಅನುಭವಿಸುವನು.

ಈ ಎಲ್ಲ ಸಿದ್ಧಾಂತಗಳು ಶ್ರೀ ಮಧ್ವಾಚಾರ್ಯರ ೩೭ ಗ್ರಂಥಗಳಲ್ಲಿ ಅಡಕವಾಗಿವೆ. ಈ ಸಿದ್ಧಾಂತಗಳನ್ನು ನಿರಂತರವಾಗಿ ಪ್ರಚುರ ಪಡಿಸಲು ಶ್ರೀ ಮಧ್ವಾಚಾರ್ಯರು ಉಡುಪಿಯಲ್ಲಿ ದ್ವಾರಕೆಯಿಂದ ತಂದ ಶ್ರೀ ಕೃಷ್ಣನ ಮಠವನ್ನು ಕಟ್ಟಿಸಿ



ಎಂಟು ಜನ ಬಾಲಸಂನ್ಯಾಸಿಗಳನ್ನು ನಿಯಮಿಸಿ ಅಷ್ಟಮಠಗಳನ್ನು ಸ್ಥಾಪಿಸಿದರು. ಸುಮಾರು ೮೦ ವರ್ಷಕಾಲ ತಮ್ಮ ಸಿದ್ಧಾಂತಗಳ ಪ್ರಚಾರ ಮಾಡಿ ಕ್ರಿ.ಶ. ೧೩೧೭ರಲ್ಲಿ [ಪಿಂಗಲ ಸಂವತ್ಸರದ ಮಾಘ ಶುದ್ಧ ನವಮಿ] ಉಡುಪಿಯ ಅನಂತೇಶ್ವರ ದೇವಸ್ಥಾನದಲ್ಲಿ ಐತರೇಯ ಭಾಷ್ಯವನ್ನು ಪ್ರವಚನ ಮಾಡುತ್ತಿದ್ದಂತೆಯೇ ಪುಷ್ಪವೃಷ್ಟಿಯಾಗಿ ಹೂವುಗಳ ಮಧ್ಯೇ ಅದೃಶ್ಯರಾದರು.

ಘಟ್ಟದ ಮೇಲೆ ಅವರ ಪ್ರಧಾನ ಶಿಷ್ಯರಾದ ಶ್ರೀ ಪದ್ಮನಾಭತೀರ್ಥರ ಪರಂಪರೆಯಲ್ಲಿ ಶ್ರೀ ಉತ್ತರಾದಿಮಠ, ಶ್ರೀ ವ್ಯಾಸರಾಜಮಠ ಮತ್ತು ಶ್ರೀ ರಾಘವೇಂದ್ರ ಸ್ವಾಮಿಗಳವರ ಮಠಗಳು ಬೆಳೆದುಬಂದವು. ಗೌಡ ಸಾರಸ್ವತ ಮಾಧ್ವ ಸಮಾಜಕ್ಕೆ ಗೋಕರ್ಣ ಪರ್ತಗಾಳಿ ಮಠವೂ ಕಾಶೀ ಮಠವೂ ಬೆಳೆದುಬಂದವು. ಈಗ ಸುಮಾರು ೨೩ ಮಾಧ್ವ ಸಂಪ್ರದಾಯದ ಮಠಗಳು ಪ್ರಚಲಿತವಾಗಿವೆ.

ಶ್ರೀ ಮಧ್ವಾಚಾರ್ಯರ ಗ್ರಂಥಗಳಿಗೆ ಶ್ರೀ ಜಯತೀರ್ಥರು ಉನ್ನತಮಟ್ಟದ ವ್ಯಾಖ್ಯಾನಗಳನ್ನು ಬರೆದಿರುವರು. ತಮ್ಮ ಶ್ರೇಷ್ಠ ವ್ಯಾಖ್ಯಾನಗಳಿಂದ ಇವರು ಟೀಕಾಚಾರ್ಯರೆಂದೇ ಪ್ರಸಿದ್ಧರಾಗಿರುವರು. ಇವರ ಗ್ರಂಥಗಳಲ್ಲಿ ಶ್ರೀ ನ್ಯಾಯಸುಧಾ ಗ್ರಂಥವು ಶ್ರೇಷ್ಠವಾದುದು. ಭಾರತೀಯ ತತ್ತ್ವಶಾಸ್ತ್ರದ ಗ್ರಂಥಗಳಲ್ಲಿ ಇದು ಬಹುಗಣ್ಯವಾದ ಸ್ಥಾನವನ್ನು ಪಡೆದಿದೆ ಶ್ರೀ ವ್ಯಾಸರಾಜರು ದ್ವೈತಮತದ ಇನ್ನೊಬ್ಬ ಶ್ರೇಷ್ಠಗ್ರಂಥಕಾರರು, ಇವರ ಚಂದ್ರಿಕಾ, ನ್ಯಾಯಾಮೃತ, ತರ್ಕತಾಂಡವ ಎಂಬ ಗ್ರಂಥಗಳು ವ್ಯಾಸತ್ರಯಾ ಎಂದು ಪ್ರಸಿದ್ಧವಾಗಿವೆ. ಉಡುಪಿ ಸೋದೆಮಠದ ಶ್ರೀ ವಾದಿರಾಜತೀರ್ಥರು ಶ್ರೇಷ್ಠಕವಿಗಳೂ ದಾರ್ಶನಿಕರೂ ಆಗಿದ್ದರು. ಇವರ ಯುಕ್ತಿ ಮಲ್ಲಿಕಾ ಎಂಬ ಗ್ರಂಥವು ದ್ವೈತಮತದ ಇನ್ನೊಂದು ಉನ್ನತ ಗ್ರಂಥವು. ಶ್ರೀ ವಿದ್ಯಾಧೀಶರು, ಶ್ರೀ ವಿಜಯಾಂದ್ರರು, ಶ್ರೀ ರಾಘವೇಂದ್ರಸ್ವಾಮಿಗಳು, ಶ್ರೀ ಶ್ರೀನಿವಾಸತೀರ್ಥರು, ಶ್ರೀ ಸತ್ಯನಾಥರು, ಶ್ರೀ ಪಾಂಡುರಂಗ ಆನಂದ ಭಟ್ಟಾರಕರು, ಶ್ರೀ ಪಾಂಡುರಂಗಿ ಕೇಶವಭಟ್ಟಾರಕರು, ಉಮರ್ಜಿಯವರು ಇತ್ಯಾದಿ ಅನೇಕಾನೇಕ ಗ್ರಂಥಕರ್ತರು ದ್ವೈತವಾಙ್ಮಯದ ಕಣಜವನ್ನು ತುಂಬಿದ್ದಾರೆ.

ಹರಿದಾಸ ವಾಙ್ಮಯವು ದ್ವೈತವಾಙ್ಮಯದ ಇನ್ನೊಂದು ಮುಖ್ಯವಾದ ಅಂಗವು. ವೇದಾಂತದ ತತ್ವಗಳನ್ನು ಕನ್ನಡದಲ್ಲಿ ತಿಳಿಸಿಕೊಡುವುದೂ, ಇತಿಹಾಸ ಪುರಾಣಗಳಲ್ಲಿ ಬಂದ ಆಧ್ಯಾತ್ಮಿಕ ಮತ್ತು ನೈತಿಕ ಬೋಧನೆಗಳನ್ನು ತಿಳಿಗನ್ನಡದಲ್ಲಿ ಬಿಡಿಸಿ ಹೇಳುವುದೂ ಈ ವಾಙ್ಮಯದ ಉದ್ದೇಶ. ಇದರಲ್ಲಿ ಸಂಗೀತ, ಜನಪದ ಶೈಲಿ, ನೈತಿಕ ಪುನರುತ್ಥಾನ, ಧಾರ್ಮಿಕ ಡಾಂಭಿಕತನದ ನಿಂದೆ, ಆಧ್ಯಾತ್ಮಿಕ ತತ್ತ್ವಪ್ರತಿಪಾದನೆ ಸೊಗಸಾಗಿ ಸಮ್ಮಿಳಿತವಾಗಿರುತ್ತವೆ. ಈ ಹರಿದಾಸ ವಾಙ್ಮಯವನ್ನು ಶ್ರೀ ನರಹರಿತೀರ್ಥರು ಆರಂಭಿಸಿದರು. ಶ್ರೀಪಾದರಾಜರು, ಶ್ರೀ

ವ್ಯಾಸರಾಜರು, ಶ್ರೀ ವಾದಿರಾಜರು, ಶ್ರೀ ರಾಘವೇಂದ್ರರೇ ಮೊದಲಾದ ಯತಿಶ್ರೇಷ್ಠರು ಮುಂದುವರಿಸಿದರು. ಶ್ರೀ ಪುರಂದರದಾಸರು, ಶ್ರೀ ಕನಕದಾಸರು, ಶ್ರೀ ವಿಜಯದಾಸರು, ಶ್ರೀ ಜಗನ್ನಾಥದಾಸರೇ ಮೊದಲಾದವರು ವಿಪುಲವಾಗಿ ಹರಿದಾಸ ವಾಙ್ಮಯವನ್ನು ಸೃಷ್ಟಿಸಿದರು. ಶ್ರೀ ಪುರಂದರದಾಸರು ಸಂಗೀತ ಮತ್ತು ಹರಿದಾಸ ಸಾಹಿತ್ಯ ಎರಡಕ್ಕೂ ಪಿತಾಮಹರೆನಿಸಿದರು. ಈ ವಾಙ್ಮಯದಲ್ಲಿ ಲಲಿತವಾದ ಕೃತಿಗಳೂ ಇರುವವು. ವಿದ್ವತ್ಪೂರ್ಣವಾದ ಕೃತಿಗಳೂ ಇರುವವು. ದ್ವೈತವಾಙ್ಮಯಕ್ಕೂ ಕನ್ನಡ ಸಾಹಿತ್ಯಕ್ಕೂ ಕರ್ನಾಟಕ ಸಂಗೀತಕ್ಕೂ ಹರಿದಾಸವಾಙ್ಮಯದ ಸೇವೆ ಅಪೂರ್ವವಾಗಿದೆ.

ಹೀಗೆ ಸಂಸ್ಕೃತದಲ್ಲಿಯೂ ಅಪಾರವಾದ ವಾಙ್ಮಯವನ್ನು ಪಡೆದಿರುವ ಅನೇಕ ಜ್ಞಾನಿಗಳೂ ತಪಸ್ವಿಗಳೂ ಆದ ಗ್ರಂಥಕರ್ತರನ್ನು ಪಡೆದಿರುವ ಭಾರತದ ಮತ್ತು ಕರ್ನಾಟಕದ ಸಾಂಸ್ಕೃತಿಕ ಪರಂಪರೆಯ ಒಂದು ಅವಿಭಾಜ್ಯ ಅಂಗವಾದ ದ್ವೈತವೇದಾಂತದ ಬೋಧನೆಗಳನ್ನು ಮೂರು ಮಾತುಗಳಲ್ಲಿ ಸಂಗ್ರಹಿಸಬಹುದು:—

(೧) ಪರಮಾತ್ಮನು ಸರ್ವಗುಣಪರಿಪೂರ್ಣನು, ಸ್ವತಂತ್ರನು, ಸರ್ವನಿಯಾಮಕನು, ಸರ್ವಾಂತರ್ಯಾಮಿಯು, ಸರ್ವೋತ್ತಮನು.

[೨) ಜೀವ-ಜಗತ್ತುಗಳು ಸತ್ಯ, ಪರಮಾತ್ಮನಿಗೆ ಅಧೀನ. ಜೀವರು ತಮ್ಮ ಆಧ್ಯಾತ್ಮಿಕ ಉನ್ನತಿಯನ್ನು ಮಾಡಿಕೊಳ್ಳಲು ಸಾಧನ ಕ್ಷೇತ್ರವೆಂದು ಈ ಸಂಸಾರಕ್ಕೆ ಬಂದಿರುವರು. ಇದು ಅವರನ್ನು ಕೆಳಕ್ಕೆ ನೂಕಿದ್ದಲ್ಲ. ಆದರೆ ಮೇಲೆಕ್ಕೆತ್ತಲು ಅವಕಾಶ ಕಲ್ಪಿಸಿದ್ದು. ಆಧ್ಯಾತ್ಮಿಕ ಉನ್ನತಿಯ ಅಧಿಕಾರ ಎಲ್ಲ ಸಜ್ಜೀವಿಗಳಿಗೂ ಇದೆ.

[೩] ವಿಹಿತ ಕರ್ಮಾನುಷ್ಠಾನ ಅಂದರೆ ಸಕ್ರಿಯ ಜೀವನವೇ ಆಧ್ಯಾತ್ಮಿಕ ಉನ್ನತಿಯ ಮೊದಲ ಹೆಜ್ಜೆ. ಕರ್ಮವು ಜ್ಞಾನಕ್ಕೆ ವಿರುದ್ಧವಲ್ಲ, ಆದರೆ ಸಹಾಯಕ. ಕೇವಲ ಪೂಜಾದಿಗಳು ಮಾತ್ರ ಕರ್ಮವಲ್ಲ. ಸತ್ಯ, ಪರೋಪಕಾರ, ಸದ್ವರ್ತನೆ, ನಾನಾಜನ ಶುಶ್ರೂಷೆ ಇವೆಲ್ಲ ವಿಹಿತಕರ್ಮದ ಅವಿಭಾಜ್ಯ ಅಂಗಗಳು.

---

ಮಂಗಳಾರತಿ ತಂದು ಬೆಳಗುವೆ ಸಿದ್ಧಲಿಂಗಯತೀಶಗೆ
ಅಂಗದೊಳು ಶಿವಲಿಂಗ ತುಂಬಿಹ ಶರಣರೆಲ್ಲರ ಪ್ರೇಮಿಗೆ
ಅಂಗಮನಭಾವದೊಳು ಲಿಂಗದ ಬೆಳಗ ಸೂಸುವ ಸ್ವಾಮಿಗೆ
ಸಂಗಮೇಶನ ಸುಖದ ಸುಗ್ಗಿಯ ಸಿದ್ಧಲಿಂಗಯತೀಶಗೆ.

---



# 'ಭೂಕೈಲಾಸ—ಗೋಕರ್ಣ'

ವೈ. ನ. ನಾಗರಾಜ

ಕಳೆದ ಮೇ ತಿಂಗಳಲ್ಲಿ ಭೂಕೈಲಾಸವೆನಿಕೊಂಡಿರುವ ಗೋಕರ್ಣ ಕ್ಷೇತ್ರದಲ್ಲಿ 'ಆತ್ಮಲಿಂಗ'ಕ್ಕೆ ಅಷ್ಟಬಂಧ ಕಾರ್ಯಕ್ರಮ ನಡೆಯಿತು. ಅಕ್ಷಯ ತೃತೀಯದಂದು ನಡೆದ ಈ ಉತ್ಸವದಿನ ಲಕ್ಷಾಂತರ ಆಸ್ತಿಕರು ಆತ್ಮಲಿಂಗದ ಸಮಗ್ರದರ್ಶನ ಪಡೆದರು. ಕಳೆದ ಅಷ್ಟದಿಗ್ಬಂಧನ ಕಾರ್ಯಕ್ರಮ ೫೦ ವರ್ಷದ ಹಿಂದೆ ನಡೆದಿತ್ತು.

**ಗೋಕರ್ಣದ ಪೌರಾಣಿಕ ಹಿನ್ನಲೆ:** ಹಿಂದೆ ಸಗರನೆಂಬ ರಾಜನು ಅಯೋಧ್ಯೆಯನ್ನು ಪಾಲಿಸುತ್ತಿದ್ದನು. ಒಮ್ಮೆ ಅವನು ಅಶ್ವಮೇಧಯಾಗವನ್ನು ಮಾಡಬೇಕೆಂದು ನಿರ್ಧರಿಸಿದನು. ಈ ಯಾಗವನ್ನು ಮಾಡಬೇಕಾದರೆ ಇಡೀ ಭೂಮಂಡಲವನ್ನೇ ಜಯಿಸಿರಬೇಕು. ಅದಕ್ಕಾಗಿ ಸಗರನು ದಿಗ್ವಿಜಯ ಮಾಡಲು ತನ್ನ ಸೈನ್ಯವನ್ನೂ ಯಾಗದ ಕುದುರೆಯನ್ನೂ ಕಳುಹಿಸಿದನು. ಸಗರನು ಯಾಗಮಾಡುವ ಸಂಗತಿಯನ್ನು ತಿಳಿದು ದೇವತೆಗಳಿಗೆ ಗಾಬರಿಯಾಯಿತು. ಅಶ್ವಮೇಧಯಾಗದಿಂದ ಸಗರನು ತುಂಬ ಪ್ರಬಲನಾಗುವನೆಂಬ ಹೆದರಿಕೆಯಿಂದ ಯಾಗದ ಕುದುರೆಯನ್ನು ಬಚ್ಚಿಟ್ಟುಬಿಟ್ಟರು. ಕುದುರೆಯೇ ಇಲ್ಲದೆ ಯಾಗ ನಡೆಯುವ ಹಾಗಿಲ್ಲವಲ್ಲ !

ಸಗರನಿಗೆ ತುಂಬ ಚಿಂತೆಯಾಯಿತು. ಅವನು ತನ್ನ ಮಕ್ಕಳನ್ನು ಕರೆದು ಯಾಗದ ಕುದುರೆಯನ್ನು ಹುಡುಕಿ ತರುವಂತೆ ಹೇಳಿದ. ಅವರು ತಂದೆಯ ಆಣತಿಯಂತೆ ಕುದುರೆಯನ್ನು ಅರಸುತ್ತಾ ಹೊರಟರು. ಎಲ್ಲ ಕಡೆಯೂ ಹುಡುಕಿದರು. ಕುದುರೆಯು ಸಿಗಲೇ ಇಲ್ಲ. ಕೊನೆಗೆ ಅವರು ಭೂಮಿಯನ್ನು ಅಗೆಯಲಾರಂಭಿಸಿದರು. ಇದರಿಂದ ಭೂಮಿಯೊಳಗೆ ಸಮುದ್ರವು ನುಗ್ಗಿತು. ಅನೇಕ ತೀರ್ಥಕ್ಷೇತ್ರಗಳು, ಅರಣ್ಯಗಳಿಂದ ಕೂಡಿದ ಭೂಮಿಯಲ್ಲಿ ಸಮುದ್ರವು ತನ್ನ ಜಲರಾಶಿಯನ್ನು ನುಗ್ಗಿಸಿತು. ಹೀಗೆ ಮುಳುಗಿಹೋದ ಕ್ಷೇತ್ರಗಳಲ್ಲಿ ಗೋಕರ್ಣವೂ ಒಂದು.

ಸಮುದ್ರೋಪಾಂತವರ್ತೀನಿ ಕ್ಷೇತ್ರಾಣಿ ಚ ಸಮಂತತಃ ।
ಇತಸ್ತತಃ ಪ್ರಯಾತಾಶ್ಚ ಜನಾಸ್ತನ್ನಿಲಯಾ ನೃಪ ॥
ಗೋಕರ್ಣಮಿತಿ ಚ ಕ್ಷೇತ್ರಂ ಪೂರ್ವಂಪ್ರೋಕ್ತಂ ತುಯತ್ತವ ।
ಅರ್ಣವೋಪಾಂತವರ್ತಿತ್ವಾತ್ ಸಮುದ್ರೇಂತರ್ಧಿ ಮಾಗಮತ್ ॥

"ಸುತ್ತಮುತ್ತಲೂ ಇದ್ದ ಸಮುದ್ರ ಪ್ರಾಂತ ಪ್ರದೇಶದ ಅನೇಕ ಕ್ಷೇತ್ರಗಳು ಮುಳುಗಿಹೋದವು. ಆಗ ಅಲ್ಲಿ ವಾಸಮಾಡಿದ್ದ ಜನರು ಬೇರೆ ಬೇರೆ ಸ್ಥಳಗಳಿಗೆ ಹೋದರು. ಸಮುದ್ರ ಸಮೀಪದಲ್ಲಿದ್ದ ಗೋಕರ್ಣ ಮಹಾಕ್ಷೇತ್ರವೂ ಮುಳುಗಿ ಅದೃಶ್ಯವಾಯಿತು." (ಬ್ರಹ್ಮಾಂಡ ಪುರಾಣ)

ಗೋಕರ್ಣದಲ್ಲಿದ್ದ ಮುನಿಗಳಿಗೆ ಆಸರೆ ತಪ್ಪಿ ಅವರೆಲ್ಲ ಮಹೇಂದ್ರಪರ್ವತಕ್ಕೆ ಬಂದರು. ಅಲ್ಲಿ ತಪಸ್ಸು ಮಾಡುತ್ತಿದ್ದ ಪರಶುರಾಮನನ್ನು ಕಂಡು ತಮಗೆ ಒದಗಿದ್ದ ತೊಂದರೆಯನ್ನು ತಿಳಿಸಿದರು. ಸಮುದ್ರಜಲವನ್ನು ಹಿಂದಕ್ಕೆ ತಳ್ಳಿಹಾಕಿ ಗೋಕರ್ಣಕ್ಷೇತ್ರವನ್ನು ಕೊಡಿಸಬೇಕೆಂದು ಕೇಳಿಕೊಂಡರು. ಪರಶುರಾಮನು ಅದಕ್ಕೆ ಒಪ್ಪಿದನು. ಅಲ್ಲದೆ ಅವನು ತನ್ನ ಭೂಮಿಯೆಲ್ಲವನ್ನೂ ಬ್ರಾಹ್ಮಣರಿಗೆ ದಾನ ಮಾಡಿಬಿಟ್ಟಿದ್ದ. ಪುನಃ ಅದೇ ನೆಲದಲ್ಲಿ ವಾಸ ಮಾಡುವುದು ಅವನಿಗೆ ಇಷ್ಟವಿರಲಿಲ್ಲ. ಸಮುದ್ರದಿಂದ ಗೋಕರ್ಣಕ್ಷೇತ್ರವನ್ನು ಮರಳಿ ಪಡೆದುಕೊಂಡು ತಾನೂ ಅಲ್ಲಿಯೇ ತಪಸ್ಸುಮಾಡಬೇಕೆಂದು ನಿಶ್ಚಯಿಸಿದನು.

ಪರಶುರಾಮನು ಮುನಿಗಳೊಂದಿಗೆ ಸಹ್ಯಗಿರಿಗೆ ಇಳಿದು ಅಲ್ಲಿಂದ ಸಮುದ್ರತೀರವನ್ನು ಸೇರಿದನು. ದಕ್ಷಿಣ ದಿಕ್ಕಿಗೆ ಎದುರಾಗಿ ನಿಂತು ಸಮುದ್ರರಾಜನನ್ನು ಕುರಿತು "ವರುಣನೇ, ನಾನು ನಿನ್ನನ್ನು ನೋಡಬೇಕೆಂಬ ಆಕಾಂಕ್ಷೆಯಿಂದ ಮುನಿಗಳೊಂದಿಗೆ ಬಂದಿದ್ದೇನೆ, ಆದುದರಿಂದ ನೀನು ಮೂರ್ತಿರೂಪವನ್ನು ಧರಿಸಿ ನನಗೆ ದರ್ಶನವನ್ನು ಕೊಡು" ಎಂದನು. ಆದರೆ ವರುಣನಿಂದ ಇದಕ್ಕೆ ಉತ್ತರವೇ ಬರಲಿಲ್ಲ. ಆಗ ಪರಶುರಾಮನು ಕೋಪಗೊಂಡು ಸಮುದ್ರದಲ್ಲಿ ನೀರೇ ಇಲ್ಲದಂತೆ ಮಾಡಲು ಸಂಕಲ್ಪಿಸಿದನು. ನೀರನ್ನು ಆಚಮನಮಾಡಿ ಶಂಕರನನ್ನು ಧ್ಯಾನಿಸುತ್ತ ತನ್ನ ಮಹಾಧನಸ್ಸನ್ನು ಕೈಗೆ ತೆಗೆದುಕೊಂಡು ಠೇಂಕಾರಮಾಡಿದನು. ಆದಕ್ಕೆ ಆಗ್ನೇಯಾಸ್ತ್ರವನ್ನು ಜೋಡಿಸಿ ಪ್ರಯೋಗಿಸಿದನು. ಸಮುದ್ರದ ಜಲರಾಶಿಯು ಅಗ್ನಿಯ ತಾಪದಿಂದ ಪೀಡಿತವಾಯಿತು. ಜಲಚರಗಳು ತೀವ್ರವಾದ ಬಾಧೆಯನ್ನು ಹೊಂದಿದವು. ಸಮುದ್ರವು ಕೊತಕೊತನೆ ಕುದಿಯಲಾರಂಭಿಸಿತು. ಸಮುದ್ರದ ಬಿಸಿಯು ಸಹ್ಯಗಿರಿಗೂ ತಟ್ಟಿತು.

ಆಗ ವರುಣನು ದಿವ್ಯಮೂರ್ತಿಯನ್ನು ಧರಿಸಿ ಜಲರಾಶಿಯಿಂದ ಎದ್ದುಬಂದನು. ಭಾರ್ಗವನಿಗೆ ನಮಸ್ಕರಿಸಿ "ಮಹಾತ್ಮ, ನಿನಗೆ ಶರಣಾಗಿರುವೆ. ನನ್ನನ್ನು ಕ್ಷಮಿಸು. ನಿನಗೆ ಬೇಕಾದುದನ್ನು ಕೇಳು" ಎಂದನು. ಪರಶುರಾಮನು ತನ್ನ ಅಸ್ತ್ರವನ್ನು ಉಪಸಂಹರಿಸಿದನು. ಅನಂತರ "ವರುಣನೆ, ಈ ಮುನಿಗಳು ಗೋಕರ್ಣ ಕ್ಷೇತ್ರದಲ್ಲಿ ವಾಸ ಮಾಡುತ್ತಿದ್ದರು. ನೀನು ಅದನ್ನು ಮುಳುಗಿಸಿದ್ದೀಯೆ. ನಿನ್ನ ಜಲರಾಶಿಯನ್ನು ಹಿಂದಕ್ಕೆ ಸೆಳೆದುಕೊಂಡು ಆ ಕ್ಷೇತ್ರವನ್ನು ಅವರಿಗೆ ಬಿಟ್ಟುಕೊಡು. ನಾನೂ ಆ ಸ್ಥಳದಲ್ಲಿಯೇ ಇರಬೇಕೆಂದಿದ್ದೇನೆ" ಎಂದನು. ವರುಣನು "ಭಾರ್ಗವ, ನೀನು ಸಂಕಲ್ಪಿಸಿದಷ್ಟು ಭೂಮಿಯನ್ನು ಹಿಂತಿರುಗಿಸುವೆ" ಎಂದನು. ಪರಶುರಾಮನು ತನ್ನ ಕೊಡಲಿಯನ್ನು ತೆಗೆದುಕೊಂಡು ಗಿರ್ರನೆ ತಿರುಗಿ



ಸುತ್ತಾ ಅತಿ ವೇಗದಿಂದ ಅದನ್ನು ಸಮುದ್ರದೆಡೆಗೆ ಎಸೆದನು. "ಈ ಕೊಡಲಿಯು ಬಿದ್ದ ಸ್ಥಳವೆ ಎಲ್ಲೆಗೆರೆಯಾಗಿ, ಸಮುದ್ರವು ಇದರಿಂದಾಚೆಗೆ ಸರಿಯಲಿ" ಎಂದನು. ಕೂಡಲೇ ಸಮುದ್ರವು ಹಿಂದಹಿಂದಕ್ಕೆ ಸರಿದು ಕೊಡಲಿ ಬಿದ್ದ ಸ್ಥಳದವರೆಗೆ ಭೂಮಿಯನ್ನು ಮೇಲೆತ್ತಿ ಪರಶುರಾಮನಿಗೆ ಒಪ್ಪಿಸಿತು. ಸಮುದ್ರವು ಹಿಂದೆ ಸರಿಯುತ್ತಿದ್ದಂತೆ ಮುಳುಗಿಹೋಗಿದ್ದ ಭೂಭಾಗಗಳು ಒಂದೊಂದಾಗಿ ಕಾಣಿಸಿಕೊಂಡವು. ಗೋಕರ್ಣ ಕ್ಷೇತ್ರವೂ ತಲೆಯೆತ್ತಿತು. ಪರಶುರಾಮನು ಅಲ್ಲಿ ಶೂರ್ಪಾರಕ ಆಶ್ರಮವನ್ನು ಕಟ್ಟಿಕೊಂಡು ತಪಸ್ಸಿಗೆ ತೊಡಗಿದನು.

ಅಂತರ್ಹಿತೇ ಸರಿನ್ನಾಥೇ ರಾಮಃ ಸ್ರುವಮುಜ್ಝುಖಃ ।
ಭ್ರಾಮಯಿತ್ವಾತಿವೇಗೇನ ಚಿಕ್ಷೇಪ ಲವಣಾರ್ಣವೇ ॥
ಕ್ಷಿಪ್ತಸ್ತೇನ ಸಮುದ್ರೇ ತು ದಿಶಮುತ್ತರಪಶ್ಚಿಮಾಮ್ ।
ಗತ್ವಾ ಸ್ರುವೋಪತದ್ರಾಜನ್ ಯೋಜನಾನಾಂ ಶತದ್ವಯಂ ॥
ಉತ್ಸಾರಯಿತ್ವಾ ಸಲಿಲಂ ಸಮುದ್ರಸ್ತಾನದಾತ್ಮನಃ ।
ಅತಿಷ್ಠದಪಸೃತ್ಯೋರ್ವೀಂ ದತ್ವಾ ರಾಮಾಯ ಪಾರ್ಥಿವ ॥

"ಆಗ ಭಾರ್ಗವರಾಮನು ಉತ್ತರ ದಿಕ್ಕಿಗೆ ಅಭಿಮುಖವಾಗಿ ನಿಂತುಕೊಂಡು ಅತಿ ವೇಗದಿಂದ ಕೊಡಲಿಯನ್ನು ತಿರುಗಿಸಿ ಅದನ್ನು ಲವಣಸಮುದ್ರದಲ್ಲಿ ಎಸೆದನು. ರಾಜನೇ, ಸಮುದ್ರಕ್ಕೆ ಎಸೆಯಲ್ಪಟ್ಟ ಆ ಕೊಡಲಿಯು ಪಶ್ಚಿಮ ಉತ್ತರ ದಿಕ್ಕುಗಳಲ್ಲಿ ಎರಡು ನೂರು ಯೋಜನಗಳಷ್ಟು ದೂರಕ್ಕೆ ಹೋಗಿ ನೀರಿನಲ್ಲಿ ಬಿದ್ದಿತು. ಸಮುದ್ರವು ತನ್ನ ಜಲರಾಶಿಯನ್ನು ಹಿಂದಕ್ಕೆ ಸೆಳೆದುಕೊಂಡು ಭೂಮಿಯನ್ನು ಮೇಲಕ್ಕೆ ಎತ್ತಿ ಅದನ್ನು ಭಾರ್ಗವನಿಗೆ ಒಪ್ಪಿಸಿ ತನ್ನ ಸ್ಥಾನದಲ್ಲಿ ನಿಂತಿತು".

(ಬ್ರಹ್ಮಾಂಡ ಪುರಾಣ)

ತತೋ ರಾಮಾಜ್ಞಯಾ ಸೋಽಪಿ ಗೋಕರ್ಣೋದಕ ಮಾಹರತ್ ।
ರಾಮೋಽಪಿ ತಂ ಸಮಭ್ಯರ್ಚ್ಯ ಗೋಕರ್ಣಂ ನಾಮ ಶಂಕರಂ ॥

"ವರುಣನು, ಪರಶುರಾಮನ ಅಪ್ಪಣೆಯ ಮೇರೆಗೆ ಗೋಕರ್ಣದಲ್ಲಿದ್ದ ನೀರನ್ನು ಪರಿಹರಿಸಿದನು; ರಾಮನು ಸಹ ಆ ಗೋಕರ್ಣೇಶ್ವರನನ್ನು ಪೂಜಿಸಿದನು.

(ನಾರದೀಯ ಪುರಾಣ)

## ಭೂಕೈಲಾಸ–ಗೋಕರ್ಣ

ಯತ್ರ ದೇವೈಸ್ತಪಸ್ತಪ್ತಂ ಮಹದಿಚ್ಛದ್ಭಿರಾಶ್ರಮೇ
ಗೋಕರ್ಣಮಿತಿ ವಿಖ್ಯಾತಂ ತ್ರಿಷು ಲೋಕೇಷು ಭಾರತ ॥

"ಯಾವ ಆಶ್ರಮದಲ್ಲಿ ದೇವತೆಗಳು ಮಹತ್ವಾಕಾಂಕ್ಷೆಯುಳ್ಳವರಾಗಿ ತಪಸ್ಸ

ನ್ನು ಮಾಡಿದರೋ ಆ ಸ್ಥಳವು ಗೋಕರ್ಣವೆಂದು ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾಯಿತು".

(ಮಹಾಭಾರತ, ವನಪರ್ವ)

ವರಾಹ ಪುರಾಣದಲ್ಲಿ ಗೋಕರ್ಣದ ಬಗ್ಗೆ ಒಂದು ಕಥೆ ಇದೆ. ಒಮ್ಮೆ ಪರಮೇಶ್ವರನು ಜಿಂಕೆಯ ರೂಪವನ್ನು ಧರಿಸಿ ಶ್ಲೇಷ್ಮಾತಕ ಪರ್ವತದಲ್ಲಿ ವಿಹರಿಸುತ್ತಿದ್ದನು. ಬ್ರಹ್ಮ, ವಿಷ್ಣು, ಇಂದ್ರ ಮೊದಲಾದ ದೇವತೆಗಳು ಶಿವನನ್ನು ಹುಡುಕಿಕೊಂಡು ಆ ಪರ್ವತಕ್ಕೆ ಬಂದರು. ಜಿಂಕೆಯ ರೂಪದಲ್ಲಿದ್ದ ಶಿವನನ್ನು ಹಿಡಿಯಲು ಯತ್ನಿಸಿದರು. ಜಿಂಕೆಯು ಅವರಿಗೆ ಸಿಗದೆ ತಪ್ಪಿಸಿಕೊಂಡು ಹೋಯಿತು. ಆದರೆ ಅದರ ಕೊಂಬು ಮಾತ್ರ ಮೂರು ಚೂರಾಗಿ ಮುರಿದು ಬ್ರಹ್ಮ, ವಿಷ್ಣು ಮತ್ತು ಇಂದ್ರರ ಕೈಗೆ ಒಂದೊಂದು ಚೂರು ಸಿಕ್ಕಿತು. ಮೂವರೂ ಶಿವನನ್ನು ಧ್ಯಾನಿಸುತ್ತ ತಮಗೆ ಸಿಕ್ಕಿದ ಕೊಂಬಿನ ಚೂರುಗಳನ್ನು ತೆಗೆದುಕೊಂಡು ಬೇರೆ ಬೇರೆ ದಿಕ್ಕುಗಳಿಗೆ ಹೋದರು. ಕೊಂಬಿನ ಚೂರುಗಳನ್ನು ಬ್ರಹ್ಮನು ಉತ್ತರ ಗೋಕರ್ಣದಲ್ಲಿಯೂ ವಿಷ್ಣುವು ಶೃಂಗೇಶ್ವರದಲ್ಲಿಯೂ ಇಂದ್ರನು ಸ್ವರ್ಗದಲ್ಲಿಯೂ ಸ್ಥಾಪಿಸಿದನು.

ಲಂಕೆಯ ಅರಸನಾದ ರಾವಣನು ಒಮ್ಮೆ ಉತ್ತರಗೋಕರ್ಣದಲ್ಲಿ ಶಿವನನ್ನು ಕುರಿತು ತಪಸ್ಸುಮಾಡಿ ಮೂರು ಲೋಕಗಳನ್ನು ಜಯಿಸುವ ವರವನ್ನು ಪಡೆದನು. ಅನಂತರ ಅವನು ಸ್ವರ್ಗಕ್ಕೆ ಹೋಗಿ ಇಂದ್ರನನ್ನು ಸೋಲಿಸಿದನು. ಇಂದ್ರನು ಅಲ್ಲಿ ನಡೆಸಿದ್ದ ಜಿಂಕೆಯ ಕೊಂಬಿನ ಚೂರನ್ನು ಕಿತ್ತು ತಂದನು. ದಾರಿಯಲ್ಲಿ ಬರುತ್ತಿರುವಾಗ ಅದನ್ನು ಪಶ್ಚಿಮ ಸಮುದ್ರ ತೀರದಲ್ಲಿಟ್ಟು ಸಂಧ್ಯಾವಂದನೆಯನ್ನು ಆಚರಿಸಿದನು. ಆಗ ಅದು ಭೂಮಿಯಲ್ಲಿ ನಾಟಿಕೊಂಡಿತು. ರಾವಣನು ಎಷ್ಟು ಪ್ರಯತ್ನಪಟ್ಟರೂ ಕೀಳಲಾಗಲಿಲ್ಲ. ಹತಾಶನಾಗಿ ಲಂಕೆಗೆ ಹಿಂದಿರುಗಿದನು. ಹೀಗೆ ಶೃಂಗವು (ಕೊಂಬು) ತಾನಾಗೆ ನೆಲಸಿದ ಸ್ಥಳವೇ ದಕ್ಷಿಣ ಗೋಕರ್ಣವೆನಿಸಿದೆ.

ಏತತ್ತೇ ಕಥಿತಂ ಸರ್ವಂ ಮಯಾ ವಿಸ್ತರತೋ ಮುನೇ
ಯಥಾಪದುತ್ತರಸ್ಥಸ್ಯ ಗೋಕರ್ಣಸ್ಯ ಮಹಾತ್ಮನಃ ||

(ವರಾಹ ಪುರಾಣ)

"ಶೃಂಗವು ತಾನಾಗಿ ನೆಲಸಿದ ಆ ಕ್ಷೇತ್ರವೇ ದಕ್ಷಿಣ ಗೋಕರ್ಣವೆನಿಸಿದೆ. ಭೂತಪತಿಯಾದ ಶಿವನು ಅಲ್ಲಿ ತಾನಾಗಿ ಪ್ರತಿಷ್ಠಿತನಾದ."

ಗೋಕರ್ಣ ಇರುವ ಪಶ್ಚಿಮ ಸಮುದ್ರದ ಕಡಲತೀರ ಹಸುವಿನ ಕಿವಿಯಂತೆಯೇ ಇದೆ. ಈ ಬಗ್ಗೆಯೂ ಒಂದು ಕಥೆ ಇದೆ. ಒಮ್ಮೆ ರುದ್ರನು ಸೃಷ್ಟಿಗಾಗಿ ಪಾತಾಳದಲ್ಲಿ ತಪಸ್ಸು ಮಾಡುತ್ತಿದ್ದ. ಆದರೆ ರುದ್ರನಿಗಿಂತ ಮೊದಲು ಬ್ರಹ್ಮನೇ ಬ್ರಹ್ಮಾಂಡವನ್ನು ಸೃಷ್ಟಿಸಿಬಿಟ್ಟ. ಇದರಿಂದ ಪಾತಾಳವು ಮುಚ್ಚಿಹೋಯಿತು. ರುದ್ರನಿಗೆ



ಹೊರಗೆ ಬರಲು ಅವಕಾಶವೇ ಇಲ್ಲದೆ ಅವನಿಗೆ ಕೋಪ ಬಂದಿತು. ಅವನು ಭೂಮಿಯನ್ನು ಸೀಳಿ ಹೊರಗೆ ಬರಲು ತವಕಿಸಿದ. ಆಗ ಭೂದೇವಿಯು ತಾನು ಗೋವಿನ ರೂಪವನ್ನು ಧರಿಸುವುದಾಗಿಯೂ ರುದ್ರನು ಸೂಕ್ಷ್ಮ ರೂಪವನ್ನು ಧರಿಸಿ ತನ್ನ ಕಿವಿಗಳ (ಕರ್ಣಗಳ) ಮೂಲಕ ಹೊರಗೆ ಬರಬೇಕೆಂದೂ ಪ್ರಾರ್ಥಿಸಿಕೊಂಡಳು. ಹೀಗೆ ರುದ್ರನು ಗೋವಿನ ಕರ್ಣಗಳಿಂದ ಬಂದ ಸ್ಥಳ ಗೋಕರ್ಣ,

ಗೋಕರ್ಣದ ಇನ್ನೊಂದು ಕಥೆ ಸಾಮಾನ್ಯವಾಗಿ ಎಲ್ಲರಿಗೂ ತಿಳಿದೇ ಇದೆ. ರಾವಣನ ತಾಯಿಯಾದ ಕೈಕಸಿಯು ಪ್ರತಿದಿನ ಶಿವಲಿಂಗವೊಂದನ್ನು ಪೂಜಿಸುತ್ತಿದ್ದಳು. ಒಂದುದಿನ ಆ ಲಿಂಗವು ಸಮುದ್ರದ ಅಲೆಗಳಲ್ಲಿ ಕೊಚ್ಚಿಹೋಗಲು ಅವಳು ತುಂಬ ದುಃಖಿತಳಾದಳು. ಆಗ ರಾವಣನು ಅಮ್ಮಾ, ದುಃಖಿಸಬೇಡ, ನಾನು ಪರಮೇಶ್ವರನ ಆತ್ಮಲಿಂಗವನ್ನೇ ತರುವೆನು—ಎಂದು ಪರ್ವತವೊಂದಕ್ಕೆ ಹೋಗಿ ಶಿವನನ್ನು ಕುರಿತು ತಪಸ್ಸು ಮಾಡಿದನು. ಶಿವನು ಅವನ ತಪಸ್ಸಿಗೆ ಮೆಚ್ಚಿ ತನ್ನ ಆತ್ಮಲಿಂಗವನ್ನು ಅನುಗ್ರಹಿಸಿದನು. 'ಆತ್ಮಲಿಂಗವನ್ನು ದಾರಿಯಲ್ಲಿ ಎಲ್ಲಿಯೂ ಇಡಬೇಡ. ನೀನು ಅದನ್ನು ಎಲ್ಲಿಟ್ಟರೆ ಅಲ್ಲೇ ಅದು ಪ್ರತಿಷ್ಠವಾಗಿಬಿಡುವುದು' ಎಂದು ತಿಳಿಸಿದನು. ರಾವಣನು ಆತ್ಮಲಿಂಗವನ್ನು ವಸ್ತ್ರದಲ್ಲಿ ಸುತ್ತಿಕೊಂಡು ಲಂಕೆಗೆ ಹೊರಟನು.

ರಾವಣನು ಆತ್ಮಲಿಂಗವನ್ನು ಪಡೆದುದನ್ನು ನೋಡಿ ದೇವತೆಗಳಿಗೆ ಹೆದರಿಕೆಯಾಯಿತು. ರಾವಣನು ಮೊದಲೇ ಬಲಿಷ್ಠ; ಈ ಆತ್ಮಲಿಂಗವನ್ನು ಪಡೆದು ಇನ್ನೇನು ಮಾಡಿಬಿಡುವನೋ ಎಂದು ಗಾಬರಿಗೊಂಡರು. ಅವರೆಲ್ಲರೂ ವಿಷ್ಣುವಿನ ಬಳಿಗೆ ಹೋಗಿ ಯಾವುದಾದರೊಂದು ಉಪಾಯ ಹೂಡಿ ರಾವಣನಿಂದ ಆತ್ಮಲಿಂಗವನ್ನು ಬೇರ್ಪಡಿಸಬೇಕೆಂದು ಕೇಳಿಕೊಂಡರು. ವಿಷ್ಣುವು ಅವರೊಂದಿಗೆ ಗಣಪತಿಯ ಬಳಿಗೆ ಹೋಗಿ ರಾವಣನಿಂದ ಆತ್ಮಲಿಂಗವನ್ನು ಬೇರ್ಪಡಿಸುವ ಉಪಾಯವನ್ನು ಹೇಳಿಕೊಟ್ಟನು.

ರಾವಣನು ಆತ್ಮಲಿಂಗವನ್ನು ತೆಗೆದುಕೊಂಡು ಲಂಕೆಗೆ ಹಿಂದಿರುಗುತ್ತಿದ್ದಾಗ ಗಣಪತಿಯು ಒಬ್ಬ ಬ್ರಹ್ಮಚಾರಿಯ ವೇಶವನ್ನು ಧರಿಸಿ ಅವನನ್ನು ಸಂಧಿಸಿದನು. ಆಗ ಸಂಜೆಯ ಸಮಯ. ರಾವಣನು ಬ್ರಹ್ಮಚಾರಿಯನ್ನು ಕುರಿತು, 'ಅಯ್ಯಾ, ಈ ಆತ್ಮಲಿಂಗವನ್ನು ನಿನ್ನ ಬಳಿ ಇಟ್ಟುಕೊಂಡಿರು. ನಾನು ಸಂಧ್ಯಾವಂದನೆ ಮುಗಿಸಿ ಬರುವೆನು. ಆದರೆ ಲಿಂಗವನ್ನು ಮಾತ್ರ ಖಂಡಿತಾ ಕೆಳಗೆ ಇಡಬೇಡ' ಎಂದನು. ಬ್ರಹ್ಮಚಾರಿಯು 'ಹಾಗೆಯೇ ಆಗಲಿ. ಆದರೆ ನೀನು ಮೂರು ಘಂಟೆಯೊಳಗೆ ಹಿಂದಿರುಗಬೇಕು. ಇಲ್ಲದಿದ್ದರೆ ಲಿಂಗವನ್ನು ನೆಲದ ಮೇಲೆ ಇಟ್ಟುಬಿಡುವೆ' ಎಂದನು.

ರಾವಣನು ಆತ್ಮಲಿಂಗವನ್ನು ಬ್ರಹ್ಮಚಾರಿಯ ಕೈಯಲ್ಲಿ ಕೊಟ್ಟು ಸಂಧ್ಯಾವಂದನೆಗೆ ಹೋದನು. ಆದರೆ ಅವನು ಬರುವುದು ತಡವಾಯಿತು. ಬ್ರಹ್ಮಚಾರಿಯು ಆತ್ಮಲಿಂಗವನ್ನು ನೆಲದ ಮೇಲೆ ಇಟ್ಟುಬಿಟ್ಟನು.

ಘೋರೇಣ ತಪಸಾ ಲಬ್ಧಂ ರಾವಣಾಖ್ಯೇನಾ ರಕ್ಷಸಾ।
ತಲ್ಲಿಂಗಂ ಸ್ಥಾಪಯಾಮಾಸ ಗೋಕರ್ಣೇ ಗಣನಾಯಕಃ ॥

"ರಾವಣನೆಂಬ ರಾಕ್ಷಸನು ಕ್ರೂರವಾದ ತಪಸ್ಸಿನಿಂದ ಪಡೆದ ಆ ಲಿಂಗವನ್ನು ಗಣಪತಿಯು ಗೋಕರ್ಣದಲ್ಲಿ ಸ್ಥಾಪಿಸಿದನು."

(ಶಿವಮಹಾಪುರಾಣ)

ರಾವಣನು ಎಷ್ಟು ಪ್ರಯತ್ನಪಟ್ಟರೂ ಆತ್ಮಲಿಂಗವನ್ನು ಮೇಲೆತ್ತಲು ಸಾಧ್ಯವಾಗಲಿಲ್ಲ. ಮಹಾಬಲಶಾಲಿಯಾದ ರಾವಣನಿಗೇ ಆ ಲಿಂಗವನ್ನು ಕದಲಿಸಲು ಸಾಧ್ಯವಾಗಲಿಲ್ಲವಾದ್ದರಿಂದ ಅದಕ್ಕೆ 'ಮಹಾಬಲೇಶ್ವರ' ಎಂಬ ಹೆಸರು ಬಂತು. ರಾವಣನು ದುಃಖ ಮತ್ತು ಕೋಪಗಳಿಂದ ಆತ್ಮಲಿಂಗವನ್ನು ಸುತ್ತಿ ತಂದಿದ್ದ ವಸ್ತ್ರವನ್ನು ಹರಿದು ನಾಲ್ಕು ಭಾಗ ಮಾಡಿ ನಾಲ್ಕು ದಿಕ್ಕಿಗೆ ಬಿಸಾಡಿದನು. ಅವೂ ನಾಲ್ಕು ಲಿಂಗಗಳಾದವು. ಅವೇ ಸಜ್ಜೇಶ್ವರ, ಗುಣವಂತೇಶ್ವರ, ಮುರಢೇಶ್ವರ ಮತ್ತು ಧಾರೇಶ್ವರ. ಮಹಾಬಲೇಶ್ವರನನ್ನೂ ಸೇರಿ ಪಂಚಲಿಂಗಗಳು.

ರಾಮಾಯಣದಲ್ಲೂ ಗೋಕರ್ಣದ ಉಲ್ಲೇಖವಿದೆ. ರಾವಣನು ತನ್ನ ಆದೇಶದಂತೆ ಗೋಕರ್ಣ ಕ್ಷೇತ್ರದಲ್ಲಿ ತಪಸ್ಸು ಮಾಡಿದನು.

ಪ್ರಾಪ್ಸ್ಯಾಮಿ ತಪಸಾ ಕಾಮಮಿತಿ ಕೃತ್ವಾಧ್ಯವಸ್ಯ ಚ ।
ಆಗಚ್ಛದಾತ್ಮಸಿದ್ಧ್ಯರ್ಥಂ ಗೋಕರ್ಣಸ್ಯಾಶ್ರಮಂ ಶುಭಮ್ ॥

"ಕಷ್ಟಸಾಧ್ಯವಾದ ಕಾರ್ಯವನ್ನು ತಪಸ್ಸಿನಿಂದಲೇ ಸಾಧಿಸಬೇಕೆಂದು ಗೋಕರ್ಣ ಕ್ಷೇತ್ರದ ಪವಿತ್ರಾಶ್ರಮಕ್ಕೆ (ರಾವಣನು) ಬಂದನು.

(ವಾಲ್ಮೀಕಿ ರಾಮಾಯಣ, ಉತ್ತರಕಾಂಡ)

ಮಹಾಭಾರತವೂ ಇತರ ಪುರಾಣಗಳೂ ಗೋಕರ್ಣ ಕ್ಷೇತ್ರದ ಮಹಿಮೆ ವರ್ಣಿಸಿವೆ.

ಅಥ ಗೋಕರ್ಣಮಾಸಾದ್ಯ ತ್ರಿಷು ಲೋಕೇಷು ವಿಶ್ರುತಮ್
ಸಮುದ್ರಮಧ್ಯೇ ರಾಜೇಂದ್ರ ಸರ್ವಲೋಕನಮಸ್ಕೃತಂ ॥
ಯತ್ರ ಬ್ರಹ್ಮಾದಯೋ ದೇವಾ ಋಷಯಶ್ಚ ತಪೋಧನಾಃ ।



ಭೂತಯಕ್ಷಪಿ[illegible] ಕಿಂನರಾಃ ಸಮಹೋರಗಾಃ ॥
ಸಿದ್ಧಚಾರಣಗಂಧರ್ವಾ ಮಾನುಷಾಃ ಪನ್ನಗಾಸ್ತಥಾ
ಸರಿತಃ ಸಾಗರಾಃ ಶೈಲಾ ಉಪಾಸಂತ ಉಮಾಪತೀಂ ॥

"(ಯಾತ್ರಿಕನು ಕನ್ಯಾತೀರ್ಥದಿಂದ) ಗೋಕರ್ಣ ಕ್ಷೇತ್ರಕ್ಕೆ ಪ್ರಯಾಣ ಮಾಡಬೇಕು ಸಮುದ್ರದ ಮಧ್ಯದಲ್ಲಿರುವ ಆ ಗೋಕರ್ಣ ಕ್ಷೇತ್ರವು ತ್ರಿಲೋಕ ಪ್ರಸಿದ್ಧವಾದುದು. ಆ ಕ್ಷೇತ್ರದಲ್ಲಿ ಬ್ರಹಾದಿದೇವತೆಗಳೂ, ಋಷಿ-ಮಹರ್ಷಿಗಳೂ, ಭೂತಗಣಗಳೂ, ಯಕ್ಷ-ಪಿಶಾಚರೂ, ಕಿನ್ನರ-ಕಿಂಪುರುಷರೂ, ಸಿದ್ಧಚಾರಣ ಗಂಧರ್ವರೂ, ನಾಗ-ಪನ್ನಗರೂ, ನದೀ-ನದ, ಸರೋವರಗಳ, ಸಮುದ್ರ ಮತ್ತು ಪರ್ವತಗಳ ಅಧಿದೇವತೆಗಳೂ ಸಹ ಸರ್ವ ಕಾಲದಲ್ಲಿಯೂ ಉಮಾಕಾಂತನಾದ ಪರಶಿವನ ಪೂಜೆಯಲ್ಲಿ ಆಸಕ್ತರಾಗಿರುತ್ತಾರೆ."

(ಮಹಾಭಾರತ, ವನಪರ್ವ)

ಶೃಣು ಮೋಹಿನಿ ಪ್ರಕ್ಷ್ಯಾಮಿ ತೀರ್ಥಂ ಪುಣ್ಯಪದಂ ನೃಣಾಂ ।
ಗೋಕರ್ಣಾಖ್ಯಂ ಹರಕ್ಷೇತ್ರಂ ಸರ್ವಪಾತಕನಾಶನಂ ॥
ಪಶ್ಚಿಮಸ್ಥಸಮುದ್ರಸ್ಯ ತೀರೇಸ್ತಿ ವರವರ್ಣಿನಿ !
ಸಾರ್ಥಂ ಯೋಜನವಿಸ್ತಾರಂ ದರ್ಶನಾದಪಿ ಮುಕ್ತಿದಂ ॥

"ಸಕಲ ಪಾಪ ಪರಿಹಾರಕವೂ ಪುಣ್ಯಪ್ರದವೂ ಆದ ಗೋಕರ್ಣವೆಂಬ ಶಿವ ಕ್ಷೇತ್ರದ ಮಹಾತ್ಮೆಯನ್ನು ಕೇಳು. ಆ ಕ್ಷೇತ್ರವು ಪಶ್ಚಿಮ ಸಮುದ್ರ ತೀರದಲ್ಲಿದೆ. ಅದರ ವಿಸ್ತಾರವು ಒಂದೂವರೆ ಗಾವುದ. ಅದು ದರ್ಶನ ಮಾತ್ರದಿಂದಲೇ ಮುಕ್ತಿಯನ್ನು ಕೊಡುವುದು."

[ನಾರದೀಯ ಪುರಾಣ)

ಮಮಾಸ್ತಿ ದೇವಿ ಸುಭಗೇ ಕ್ಷೇತ್ರಂ ಗೋಕರ್ಣ ಸಂಜ್ಞಿತಂ ।
ಗೋಕರ್ಣೇಶಂ ಸಮರಾಧ್ಯ ವಿಮುಕ್ತಾ ಬಹವೋ ಜನಾಃ ॥
ಪಶ್ಚಿಮೇ ಸಾಗರೂಪಾಂತೇ ತಕ್ಷೇತ್ರಂ ಮಮ ಕಾಮದಂ ।
ಭೋಗಮೋಕ್ಷಪ್ರದಂ ದೇವಿ ಸರ್ವಪಾಪವಿನಾಶಕಂ ॥

"ಪಶ್ಚಿಮ ಸಮುದ್ರದ ಸಮೀಪದಲ್ಲಿ ಗೋಕರ್ಣವೆಂಬ ಶಿವಕ್ಷೇತ್ರವೊಂದಿರುವುದು. ಅದು ನಮಗೆ ಬಹುಪ್ರಿಯವಾದುದು, ಅನೇಕರು ಗೋಕರ್ಣೇಶ್ವರನನ್ನು ಆರಾಧಿಸಿ ಸ್ಥಿರ ಮುಕ್ತಿಯನ್ನು ಸಂಪಾದಿಸಿರುವರು. ಅದು ಐಹಿಕ ಭೋಗಾದಿಗಳನ್ನು ಒದಗಿಸುವುದಲ್ಲದೆ ಸಕಲ ಪಾಪನಿವಾರಕವೂ ಎನಿಸಿದೆ."

(ಶಿವರಹಸ್ಯ)

ಪಶ್ಚಿಮಾಂಬುಧೀರಸ್ಥಂ ಗೋಕರ್ಣಂ ಕ್ಷೇತ್ರಮುತ್ತಮಮ್ ।
ಬ್ರಹ್ಮಹತ್ಯಾದಿಪಾಪಘ್ನಂ ಸರ್ವ ಕಾಮಫಲಪ್ರದಂ ॥
ಕೃತೇ ಯುಗೇ ಸಹಿ ಶ್ವೇತಸ್ತ್ರೇತಾಯಾಂ ಸೋತಿಲೋಹಿತಃ ।

ರಾವಣನು ಆತ್ಮಲಿಂಗವನ್ನು ಬ್ರಹ್ಮಚಾರಿಯ ಕೈಯಲ್ಲಿ ಕೊಟ್ಟು ಸಂಧ್ಯಾವಂದನೆಗೆ ಹೋದನು. ಆದರೆ ಅವನು ಬರುವುದು ತಡವಾಯಿತು. ಬ್ರಹ್ಮಚಾರಿಯು ಆತ್ಮಲಿಂಗವನ್ನು ನೆಲದ ಮೇಲೆ ಇಟ್ಟುಬಿಟ್ಟನು.

ಘೋರೇಣ ತಪಸಾ ಲಬ್ಧಂ ರಾವಣಾಖ್ಯೇನ ರಕ್ಷಸಾ ।
ತಲ್ಲಿಂಗಂ ಸ್ಥಾಪಯಾಮಾಸ ಗೋಕರ್ಣೇ ಗಣನಾಯಕಃ ॥

"ರಾವಣನೆಂಬ ರಾಕ್ಷಸನು ಘೋರವಾದ ತಪಸ್ಸಿನಿಂದ ಪಡೆದ ಆ ಲಿಂಗವನ್ನು ಗಣಪತಿಯು ಗೋಕರ್ಣದಲ್ಲಿ ಸ್ಥಾಪಿಸಿದನು."

(ಶಿವಮಹಾಪುರಾಣ)

ರಾವಣನು ಎಷ್ಟು ಪ್ರಯತ್ನಪಟ್ಟರೂ ಆತ್ಮಲಿಂಗವನ್ನು ಮೇಲೆತ್ತಲು ಸಾಧ್ಯವಾಗಲಿಲ್ಲ. ಮಹಾಬಲಶಾಲಿಯಾದ ರಾವಣನಿಗೇ ಆ ಲಿಂಗವನ್ನು ಕದಲಿಸಲು ಸಾಧ್ಯವಾಗಲಿಲ್ಲವಾದ್ದರಿಂದ ಅದಕ್ಕೆ 'ಮಹಾಬಲೇಶ್ವರ' ಎಂಬ ಹೆಸರು ಬಂತು. ರಾವಣನು ದುಃಖ ಮತ್ತು ಕೋಪಗಳಿಂದ ಆತ್ಮಲಿಂಗವನ್ನು ಸುತ್ತಿ ತಂದಿದ್ದ ವಸ್ತ್ರವನ್ನು ಹರಿದು ನಾಲ್ಕು ಭಾಗ ಮಾಡಿ ನಾಲ್ಕು ದಿಕ್ಕಿಗೆ ಬಿಸಾಡಿದನು. ಅವೂ ನಾಲ್ಕು ಲಿಂಗಗಳಾದವು. ಅವೇ ಸಜ್ಜೇಶ್ವರ, ಗುಣವಂತೇಶ್ವರ, ಮುರಡೇಶ್ವರ ಮತ್ತು ಧಾರೇಶ್ವರ. ಮಹಾಬಲೇಶ್ವರನನ್ನೂ ಸೇರಿ ಪಂಚಲಿಂಗಗಳು.

ರಾಮಾಯಣದಲ್ಲೂ ಗೋಕರ್ಣದ ಉಲ್ಲೇಖವಿದೆ. ರಾವಣನು ತನ್ನ ಆದೇಶದಂತೆ ಗೋಕರ್ಣ ಕ್ಷೇತ್ರದಲ್ಲಿ ತಪಸ್ಸು ಮಾಡಿದನು:

ಪ್ರಾಪ್ಸ್ಯಾಮಿ ತಪಸಾ ಕಾಮಮಿತಿ ಕೃತ್ವಾಧ್ಯವಸ್ಯ ಚ ।
ಆಗಚ್ಛದಾತ್ಮಸಿದ್ಧ್ಯರ್ಥಂ ಗೋಕರ್ಣಸ್ಯಾಶ್ರಮಂ ಶುಭಮ್ ॥

"ಕಷ್ಟಸಾಧ್ಯವಾದ ಕಾರ್ಯವನ್ನು ತಪಸ್ಸಿನಿಂದಲೇ ಸಾಧಿಸಬೇಕೆಂದು ಗೋಕರ್ಣ ಕ್ಷೇತ್ರದ ಪವಿತ್ರಾಶ್ರಮಕ್ಕೆ (ರಾವಣನು) ಬಂದನು.

(ವಾಲ್ಮೀಕಿ ರಾಮಾಯಣ, ಉತ್ತರಕಾಂಡ)

ಮಹಾಭಾರತವೂ ಇತರ ಪುರಾಣಗಳೂ ಗೋಕರ್ಣ ಕ್ಷೇತ್ರದ ಮಹಿಮೆ ವರ್ಣಿಸಿವೆ.

ಅಥ ಗೋಕರ್ಣಮಾಸಾದ್ಯ ತ್ರಿಷು ಲೋಕೇಷು ವಿಶ್ರುತಮ್
ಸಮುದ್ರಮಧ್ಯೇ ರಾಜೇಂದ್ರ ಸರ್ವಲೋಕನಮಸ್ಕೃತಂ ॥
ಯತ್ರ ಬ್ರಹ್ಮಾದಯೋ ದೇವಾ ಋಷಯಶ್ಚ ತಪೋಧನಾಃ ।



ಭೂತಯಕ್ಷಪಿಶಾಚಾಶ್ಚ ಕಿಂನರಾಃ ಸಮಹೋರಗಾಃ ॥
ಸಿದ್ಧಚಾರಣಗಂಧರ್ವಾ ಮಾನುಷಾಃ ಪನ್ನಗಾಸ್ತಥಾ
ಸರಿತಃ ಸಾಗರಾಃ ಶೈಲಾ ಉಪಾಸಂತ ಉಮಾಪತಿಂ ॥

"(ಯಾತ್ರಿಕನು ಕನ್ಯಾತೀರ್ಥದಿಂದ) ಗೋಕರ್ಣ ಕ್ಷೇತ್ರಕ್ಕೆ ಪ್ರಯಾಣ ಮಾಡಬೇಕು. ಸಮುದ್ರದ ಮಧ್ಯದಲ್ಲಿರುವ ಆ ಗೋಕರ್ಣ ಕ್ಷೇತ್ರವು ತ್ರಿಲೋಕ ಪ್ರಸಿದ್ಧವಾದುದು. ಆ ಕ್ಷೇತ್ರದಲ್ಲಿ ಬ್ರಹ್ಮಾದಿದೇವತೆಗಳೂ, ಋಷಿ-ಮಹರ್ಷಿಗಳೂ, ಭೂತಗಣಗಳೂ, ಯಕ್ಷ-ಪಿಶಾಚರೂ, ಕಿನ್ನರ-ಕಿಂಪುರುಷರೂ, ಸಿದ್ಧಚಾರಣ ಗಂಧರ್ವರೂ, ನಾಗ-ಪನ್ನಗರೂ, ನದೀ-ನದ, ಸರೋವರಗಳ, ಸಮುದ್ರ ಮತ್ತು ಪರ್ವತಗಳ ಅಧಿದೇವತೆಗಳೂ ಸಹ ಸರ್ವ ಕಾಲದಲ್ಲಿಯೂ ಉಮಾಕಾಂತನಾದ ಪರಶಿವನ ಪೂಜೆಯಲ್ಲಿ ಆಸಕ್ತರಾಗಿರುತ್ತಾರೆ."

(ಮಹಾಭಾರತ, ವನಪರ್ವ)

ಶೃಣು ಮೋಹಿನಿ ವಕ್ಷ್ಯಾಮಿ ತೀರ್ಥಂ ಪುಣ್ಯಪ್ರದಂ ನೃಣಾಂ ।
ಗೋಕರ್ಣಾಖ್ಯಂ ಹರಕ್ಷೇತ್ರಂ ಸರ್ವಪಾತಕನಾಶನಂ ॥
ಪಶ್ಚಿಮಸ್ಥಸಮುದ್ರಸ್ಯ ತೀರೇಸ್ತಿ ವರವರ್ಣಿನಿ !
ಸಾರ್ಧಂ ಯೋಜನವಿಸ್ತಾರಂ ದರ್ಶನಾದಪಿ ಮುಕ್ತಿದಂ ॥

"ಸಕಲ ಪಾಪ ಪರಿಹಾರಕವೂ ಪುಣ್ಯಪ್ರದವೂ ಆದ ಗೋಕರ್ಣವೆಂಬ ಶಿವಕ್ಷೇತ್ರದ ಮಹಾತ್ಮೆಯನ್ನು ಕೇಳು. ಆ ಕ್ಷೇತ್ರವು ಪಶ್ಚಿಮ ಸಮುದ್ರ ತೀರದಲ್ಲಿದೆ. ಅದರ ವಿಸ್ತಾರವು ಒಂದೂವರೆ ಗಾವುದ. ಅದು ದರ್ಶನ ಮಾತ್ರದಿಂದಲೇ ಮುಕ್ತಿಯನ್ನು ಕೊಡುವುದು."

(ನಾರದೀಯ ಪುರಾಣ)

ಮಮಾಸ್ತಿ ದೇವಿ ಸುಭಗೇ ಕ್ಷೇತ್ರಂ ಗೋಕರ್ಣ ಸಂಜ್ಞಿತಂ ।
ಗೋಕರ್ಣೇಶಂ ಸಮಾರಾಧ್ಯ ವಿಮುಕ್ತಾ ಬಹವೋ ಜನಾಃ ॥
ಪಶ್ಚಿಮೇ ಸಾಗರೋಪಾಂತೇ ತತ್ಕ್ಷೇತ್ರಂ ಮಮ ಕಾಮದಂ ।
ಭೋಗಮೋಕ್ಷಪ್ರದಂ ದೇವಿ ಸರ್ವಪಾಪವಿನಾಶಕಂ ॥

"ಪಶ್ಚಿಮ ಸಮುದ್ರದ ಸಮೀಪದಲ್ಲಿ ಗೋಕರ್ಣವೆಂಬ ಶಿವಕ್ಷೇತ್ರವೊಂದಿರುವುದು. ಅದು ನನಗೆ ಬಹುಪ್ರಿಯವಾದುದು. ಅನೇಕರು ಗೋಕರ್ಣೇಶ್ವರನನ್ನು ಆರಾಧಿಸಿ ಸ್ಥಿರ ಮುಕ್ತಿಯನ್ನು ಸಂಪಾದಿಸಿರುವರು. ಅದು ಐಹಿಕ ಭೋಗಾದಿಗಳನ್ನು ಒದಗಿಸುವುದಲ್ಲದೆ ಸಕಲ ಪಾಪನಿವಾರಕವೂ ಎನಿಸಿದೆ."

(ಶಿವರಹಸ್ಯ)

ಪಶ್ಚಿಮಾಂಬುಧಿತೀರಸ್ಥಂ ಗೋಕರ್ಣಂ ಕ್ಷೇತ್ರಮುತ್ತಮಮ್ ।
ಬ್ರಹ್ಮಹತ್ಯಾದಿಪಾಪಘ್ನಂ ಸರ್ವ ಕಾಮಫಲಪ್ರದಂ ॥
ಕೃತೇ ಯುಗೇ ಸಹಿ ಶ್ವೇತಸ್ತ್ರೇತಾಯಾಂ ಸೋತಿಲೋಹಿತಃ ।

ದ್ವಾಪರೇ ಪೀತವರ್ಣಶ್ಚ ಕಲೌ ಶ್ಯಾಮೋ ಭವಿಷ್ಯತಿ ॥
ಆಕ್ರಾಂತ ಸಪ್ತಪಾತಾಲಕುಹರೋಪಿ ಮಹಾಬಲಂ ।
ಪ್ರಾಪ್ತೇ ಕಲಿಯುಗೇ ಘೋರೇ ಮೃದುತಾಮುಪಯಾಸ್ಯತಿ ॥

"ಪಶ್ಚಿಮ ದಿಕ್ಕಿನ ಸಮುದ್ರ ತೀರದಲ್ಲಿ ಗೋಕರ್ಣವೆಂಬ ಉತ್ತಮವಾದ ಕ್ಷೇತ್ರವಿದೆ. ಇದು ಬ್ರಹ್ಮಹತ್ಯಾಪಾಪವನ್ನು ನಿವಾರಿಸುವುದು; ಸಕಲ ಇಷ್ಟಾರ್ಥಗಳನ್ನೂ ಈಡೇರಿಸುವುದು. ಈ ಕ್ಷೇತ್ರದಲ್ಲಿರುವ ಮಹಾಬಲಲಿಂಗವು ಕೃತಯುಗದಲ್ಲಿ ಬೆಳ್ಳಗೂ, ತ್ರೇತಾಯುಗದಲ್ಲಿ ಕೆಂಪಗೂ, ದ್ವಾಪರಯುಗದಲ್ಲಿ ಹಳದಿ ಬಣ್ಣವಾಗಿಯೂ ಕಲಿಯುಗದಲ್ಲಿ ಕಪ್ಪು ಬಣ್ಣವಾಗಿಯೂ ಇರುವುದು. ಮಹಾಬಲಲಿಂಗವು ಸಪ್ತಪಾತಾಳಲೋಕವನ್ನೂ ಆವರಿಸಿರುವುದು. ಇದು ಕಲಿಯುಗದಲ್ಲಿ ಮೃದುವಾಗಿರುವುದು;

**ಗುಹೆಗಳು :** ಆತ್ಮಲಿಂಗವಿರುವ ಮಹಾಬಲೇಶ್ವರ ದೇವಾಲಯದ ಗರ್ಭಗುಡಿಯು ೨೦ ಅಡಿ ಅಗಲವಿದ್ದು ೨೦ ಅಡಿ ಉದ್ದವಿದೆ. ಇದನ್ನು ವಿಶ್ವಕರ್ಮನು ಕಟ್ಟಿಸಿದನಂತೆ.

ಗೋಕರ್ಣದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರ, ಅಗಸ್ತ್ಯ, ರಾಮ ಮುಂತಾದ ಪುರಾಣ ಪ್ರಸಿದ್ಧರು ತಪಸ್ಸು ಮಾಡಿರುವುದಾಗಿ ಹೇಳಲಾಗುತ್ತದೆ. ತಪಸ್ಸಿಗೆ ಅನುಕೂಲವಾದ ಗುಹೆಗಳು ಬಹಳಷ್ಟಿವೆ.

ಮಹಾಬಲೇಶ್ವರನ ಗುಡಿಯೆದುರು ವಿಶಾಲಸಾಗರ ಭೋರ್ಗರೆಯುತ್ತಿದ್ದರೆ ಹಿಂಭಾಗದಲ್ಲಿ (೪೦ ಅಡಿ ದೂರ) ಗಣಪತಿಯ ಗುಡಿ ಇದೆ. ಆತ್ಮಲಿಂಗವನ್ನು ನೆಲದಮೇಲೆ ಇಟ್ಟಾಗ ಕೋಪಗೊಂಡ ರಾವಣ ಗಣಪತಿಯ ನೆತ್ತಿಯ ಮೇಲೆ ಗುದ್ದಿದ್ದರಿಂದ ಇಲ್ಲಿರುವ ಗಣಪತಿಯ ವಿಗ್ರಹದ ನೆತ್ತಿಯಲ್ಲಿ ತಗ್ಗು ಉಂಟಾಗಿರುವುದು ಕಾಣುತ್ತದೆ. ಇಂಥ ನೆತ್ತಿಯಿರುವ ಗಣಪತಿಯ ಮೂರ್ತಿ ಇದೊಂದೇ!

ಮಹಾಬಲೇಶ್ವರಗುಡಿ ಆಗ್ನೇಯಕ್ಕೆ ಕೋಟಿತೀರ್ಥವೆಂಬ ಕೆರೆಯಿದ್ದು ಅದರ ಮಧ್ಯೆ ಸಪ್ತಕೋಟೇಶ್ವರ ಗುಡಿಯಿದೆ. ಕೋಟಿತೀರ್ಥದ ದಂಡೆಯಮೇಲೆ ಕಾಳಭೈರವ, ಗರುಡ, ಅನಿರುದ್ಧ, ಅಗಸ್ತ್ಯ, ಕದಂಬೇಶ್ವರ ಮುಂತಾದ ಗುಡಿಗಳಿವೆ. ಕೋಟಿತೀರ್ಥದ ಬಗೆಗೆ ಇರುವ ಪ್ರಚಲಿತ ಇದು: ಒಮ್ಮೆ ಗರುಡನು ದುರ್ಮುಖಿ ಎಂಬ ಸರ್ಪವನ್ನು ಎತ್ತಿಕೊಂಡು ಶತಶೃಂಗನೆಂಬ ಪರ್ವತದಮೇಲೆ ಹಾರುತ್ತಿದ್ದಾಗ ಸರ್ಪವು ಕೊಸರಿಕೊಂಡು ಆ ಪರ್ವತದ ಮೇಲೆ ಬಿದ್ದಿತು. ಆಗ ಕೋಪಗೊಂಡ ಗರುಡನು ಆ ಪರ್ವತವನ್ನೇ ಎತ್ತಿ ಸಮುದ್ರದಲ್ಲಿ ಎಸೆಯಲು ಸಿದ್ಧನಾದಾಗ ಬ್ರಹ್ಮನು ಪರ್ವತದಮೇಲೆ ಮೂರು ಲೋಕಗಳ ಭಾರ ಹಾಕಿದ. ಆಗ ಗರುಡನು ಅಗಸ್ತ್ಯ



ಮುನಿಯ ದಯದಿಂದ ಆ ಪರ್ವತವನ್ನು ತನ್ನ ಅಂಗೈಯಲ್ಲಿಟ್ಟುಕೊಂಡು ಗೋಕರ್ಣದ ಬಳಿಇಟ್ಟ. ಬ್ರಹ್ಮ ಹಾಕಿದ ಭಾರದಿಂದ ಪರ್ವತದೊಳಗಿನ ಕೋಟಿತೀರ್ಥಗಳು ಹೊರಚೆಲ್ಲಿ ಇಂದಿನ ಕೋಟಿತೀರ್ಥವಾಯಿತೆಂದು ಕತೆ. ಇಲ್ಲಿ ಇಂದಿಗೂ ಶತಶೃಂಗವೆಂಬ ಪರ್ವತವನ್ನು ತೋರಿಸುತ್ತಾರೆ. ಅದರ ಮೇಲೆ ಅಗಸ್ತ್ಯ, ಸುಮಿತ್ರ, ಗಂಗ ಮುಂತಾದ ತೀರ್ಥಗಳಿವೆ.

ಕೋಟಿತೀರ್ಥದ ಪೂರ್ವಕ್ಕಿರುವ ಶಂಕರನಾರಾಯಣ ಗುಡಿಯೊಳಗಿನ ಮೂರ್ತಿಯು ಅರ್ಧ ಶಿವನ ಆಕಾರವಾಗಿಯೂ ಇದೆ. ಇದರೆದುರು ಜ್ಞಾನ ಮುಕ್ತಿ ಮಂಟಪಗಳಿವೆ.

ಇಲ್ಲಿರುವ ಜಟಾಯುತೀರ್ಥ ಎಂಬ ಕಡಿದಾದ ಬಂಡೆಕಲ್ಲುಗಳ ಸ್ಥಳದಲ್ಲಿ ಸದಾಕಾಲ ನೀರು ಒಸರುತ್ತಿರುತ್ತದೆ. ಅದು ಹೇಗೆ ಎಲ್ಲಿಂದ ಬರುತ್ತಿದೆನ್ನುವುದು ಇನ್ನೂ ತಿಳಿದಿಲ್ಲ. ಇಲ್ಲಿಂದ ಸ್ವಲ್ಪ ಮುಂದೆ ಹೋದಾಗ ಸಿಗುವ ಮಹೇಶ್ವರ ಗುಡ್ಡದ ಮೇಲೆ ನಿಂತು ಅರಬ್ಬೀ ಸಮುದ್ರದ ಚೆಲುವನ್ನು ಪ್ರಕೃತಿಯ ಸೊಬಗನ್ನು ಸವಿಯಬೇಕು.

ಎಂಟನೆಯ ಶತಮಾನದಲ್ಲಿ ಲೋಕಾದಿತ್ಯವೆಂಬ ಅರಸು ಗೋಕರ್ಣವನ್ನು ಆಳುತ್ತಿದ್ದನಂತೆ. ವಿಜಯನಗರದರಸರು ಇಲ್ಲಿಯ ಅನೇಕ ದೇವಾಲಯಗಳಿಗೆ ದತ್ತಿ ಕೊಡುತ್ತಿದ್ದರು.

ಪೌರಾಣಿಕ ಐತಿಹಾಸಿಕ ಬೃಹತ್ತು ಮಹತ್ತು ಪಡೆದಿರುವ ಗೋಕರ್ಣ ಸಾಂಸ್ಕೃತಿಕವಾಗಿಯೂ ಧಾರ್ಮಿಕವಾಗಿಯೂ ಸುಸಂಪನ್ನ ಸ್ಥಳವಾಗಿದೆ. ಮಂತ್ರದ್ರಷ್ಟಾರರಾದ ಮಹರ್ಷಿ ದೈವರಾತರು ಇಲ್ಲಿಯೇ ತಮ್ಮ ಸಾಧನೆ ಬೋಧನೆ ನಡೆಸಿದ್ದು. ಜ್ಯೋತಿಷ್ಯಶಾಸ್ತ್ರದ ಪಾರಂಗತರು ಇಲ್ಲಿದ್ದಾರೆ. ಅಗ್ನಿಹೋತ್ರಿಗಳು, ಗುರುಕುಲ ಪರಂಪರೆಯ ಪಾಠಶಾಲೆಗಳು, ಪುರಾಣ ಸತ್ರಗಳು, ವೈಚಾರಿಕ ಪ್ರವಚನಗಳು, ಇವೆಲ್ಲ ಗೋಕರ್ಣದಲ್ಲಿ ನೆಲೆಯಾಗಿ ನಿಂತಿವೆ. ಯಜ್ಞಯಾಗಾದಿ ವೈದಿಕ ಅನುಷ್ಠಾನ ಬಲ್ಲ ಪ್ರಕಾಂಡ ಪಂಡಿತರು ಅನೇಕರಿದ್ದಾರೆ ಇಲ್ಲಿ. ಚತುರ್ವೇದ ವಿದ್ವಾಂಸರು, ಕನ್ನಡ ಸಾರಸತ್ವ ಲೋಕಕ್ಕೆ ಸತ್ವ ತುಂಬಿದವರು, ಯಕ್ಷಗಾನ ವೇಷಕಟ್ಟಿ ಕುಣಿದವರು ಹೀಗೆ ನಾನಾ ಖ್ಯಾತಿಗೆ ಗೋಕರ್ಣ ಪ್ರಖ್ಯಾತವಾಗಿದೆ. ಗೋಕರ್ಣ ಪ್ರಕೃತಿಯೂ ಹಸಿರು ಪ್ರಭಾವವನ್ನು ಪಡೆದಿದೆ. ಇಲ್ಲಿಯ ಜೀವಶಕ್ತಿಗೆ ನದಿ ನದಗಳು, ಪಕ್ಷಿಪವನದ ಸಂಗೀತ, ಅರಬ್ಬೀ ಸಮುದ್ರದ ರುದ್ರರಮಣೀಯತೆ, ವೇದಧ್ವನಿಯ ನಿರಂತರನಾದ, ಹೆಜ್ಜೆಯಿಟ್ಟಲ್ಲಿ ದೇವದೇವತೆಗಳ ಸಾಕ್ಷಾತ್ಕಾರದಿಂದಾಗಿ ಭಕ್ತಿಭಾವದಲ್ಲಿ ತನಗೆ ತಾನೇ ಸಾಮರಸ್ಯ ಉಕ್ಕಿಸಿದೆ.

# ಚಾಡಿ

ಎಚ್. ಎಸ್. ಸಿದ್ದಗಂಗಪ್ಪ ಎಂ. ಎ.

ವ್ಯಕ್ತಿಯ ಹಲವು ಕೆಟ್ಟ ಗುಣಗಳಲ್ಲಿ ಚಾಡಿ ಹೇಳುವುದು, ಕೇಳುವುದೂ ಒಂದು. ಯುಗಾಂತರಗಳಿಂದ ಹರಿದು ಬಂದಿರು ಈ ಗುಣ ಅನೇಕ ದುರಂತಗಳಿಗೆ ಮೂಲ ಕೇಂದ್ರವಾಗಿದೆ. ಚಾಡಿ ಹೇಳುವರನ್ನು "ಕೊಂಡಿ ಮಂಚಣ್ಣ" ಕೇಳುಗರನ್ನು "ಹಿತ್ತಾಳೆ ಕಿವಿಯುವರೆಂದು" ಕರೆದು ಸಮಾಜದಲ್ಲಿ ಅವರನ್ನು ಪ್ರತ್ಯೇಕವಾಗಿ ಇಟ್ಟಿದ್ದರೂ, ಸಮಾಜದ ಹಲವು ಸ್ಥಳಗಳಲ್ಲಿ ಹಾಲಿನಲ್ಲಿ ನೀರು ಬೆರೆತಂತೆ ಸೇರಿಹೋಗಿದ್ದಾರೆ.

ಚಾಡಿ ಹೇಳುವುದು, ಕೇಳುವುದು, ಎರಡೂ ಬದುಕಿಗೆ ಅಪಾಯಕಾರಿಗಳೆ. ಒಂದು ಮತ್ತೊಂದಕ್ಕೆ ಪೂರಕ, ಪ್ರೇರಕ. ವೈಯಕ್ತಿಕವಾದ ಕ್ಷುಲ್ಲಕ ಕಾರಣಗಳಿಂದ ತಮ್ಮ ಬೇಳೆಯನ್ನು ಬೇಯಿಸಿಕೊಳ್ಳುವ ದೃಷ್ಟಿಯಿಂದ ಎಷ್ಟೋ ಜನ ನಿರಪರಾಧಿಗಳ ಸಂಕಷ್ಟಗಳಿಗೆ, ದುರಂತಗಳಿಗೆ ನಾಂದಿಯಾಗಿದೆ. ಸ್ವಾರ್ಥಕ್ಕಾಗಿ ಅನೇಕ ಜನರ ಜೀವನ ಕಮರಿಹೋಗಿದೆ. ಇತಿಹಾಸ ಪುರಾಣಗಳ ಪುಟಗಳ ಮೇಲೆ ಕಣ್ಣಾಯಿಸಿದರೆ ಇಂತಹ ನೂರಾರು ನಿದರ್ಶನಗಳು ಕಂಡುಬರುತ್ತವೆ. ದಾಸಿ ಮಂಥರೆಯ ಪ್ರಚೋದನೆಯಿಂದ, ಪ್ರಲೋಭನೆಯಿಂದ ಕೈಕೆ ರಾಮನನ್ನು ಕಾಡಿಗೆ ಹೋಗುವಂತೆ ಮಾಡಿ ಅನೇಕ ದುರಂತಗಳ ಸರಮಾಲೆಗೆ ಕಾರಣಳಾಗುವುದರ ಜೊತೆಗೆ ತನ್ನ ಉದ್ದೇಶ, ಆಸೆ ಆಕಾಂಕ್ಷೆಗಳು ಸಫಲವಾಗದೆ ತನ್ನ ಒಡಲಾಗ್ನಿಗೆ ತಾನೇ ಬಲಿಯಾಗುತ್ತಾಳೆ. ಶೂರ್ಪಖಿನ ತನ್ನ ಅಣ್ಣನಾದ ರಾವಣನಿಗೆ ರಾಮಲಕ್ಷ್ಮಣರ ಬಗ್ಗೆ ಇಲ್ಲದ ಸಲ್ಲದ ಚಾಡಿ ಹೇಳಿ ಇಡೀ ಲಂಕೆಯ ವಿನಾಶಕ್ಕೆ ಕಾರಣಳಾಗುತ್ತಾಳೆ.

ಒಬ್ಬ ವ್ಯಕ್ತಿಯ ಬಗ್ಗೆ ಬೇರೊಬ್ಬರಿಗೆ ಚಾಡಿ ಹೇಳುವುದಕ್ಕೆ ಅನೇಕ ಕಾರಣಗಳಿವೆ. ಒಂದೇ ಕಡೆ ವಾಸಿಸುತ್ತಿದ್ದು ಉದ್ಯೋಗಸ್ಥರಾಗಿದ್ದು ಇಲ್ಲವೆ ಸ್ನೇಹಿತರಾಗಿದ್ದು, ತನ್ನಲ್ಲಿ ಇಲ್ಲದ ವಿಶೇಷ ಗುಣಗಳು, ಅರ್ಹತೆ, ಪ್ರತಿಭೆ, ಸಹೃದಯತೆ, ಆಕರ್ಷಕ ವ್ಯಕ್ತಿತ್ವ ಇದ್ದಾಗ, ಎಲ್ಲರೂ ಆ ವ್ಯಕ್ತಿತ್ವಗಳನ್ನು ಗೌರವಿಸ ತೊಡಗಿದಾಗ, ತಮಗರಿವಿಲ್ಲದೆಯೇ ಆ ವ್ಯಕ್ತಿಗಳ ಬಗ್ಗೆ ದ್ವೇಷ, ಮತ್ಸರ, ಅಸೂಯೆ ಪ್ರಾರಂಭವಾಗುತ್ತದೆ. ಅವರ ಸೃಜನಾತ್ಮಕ ಬೆಳವಣಿಗೆಯನ್ನು ಸಹಿಸಲಾಗದೆ ಅವರ ವ್ಯಕ್ತಿತ್ವಕ್ಕೆ ಮಸಿ ಬಳಿಯುವ ಮಹಾ



ಕಾರ್ಯಕ್ಕೆ ಕೈಹಾಕುತ್ತಾರೆ. ನೇರವಾಗಿ ಪ್ರತಿಭಟಿಸಲಾಗದೆ ಆ ವ್ಯಕ್ತಿಗಳ ಬಗ್ಗೆ ಆರೋಪಗಳ ಪಟ್ಟಿಯನ್ನೆ ತಯಾರಿಸಿ ಚಾಡಿಯೆಂಬ ಕ್ರೂರ ಬಾಣವನ್ನು ಪ್ರಯೋಗಿಸಿ, ಕಲುಷಿತ ವಾತಾವರಣವನ್ನು ಸೃಷ್ಟಿಸುತ್ತಾರೆ ಈ ಚಾಡಿಕೋರ ಬ್ರಹ್ಮರು.

ಒಬ್ಬ ವ್ಯಕ್ತಿಯಲ್ಲಿ ಚಾಡಿ ಹೇಳುವ ಈ ಅವಗುಣ ಗುಪ್ತಗಾಮಿನಿಯಾಗಿಯೇ ಹರಿಯುತ್ತದೆ. ಚಾಡಿ ಹೇಳುವವರಿಗೆ, ಕೇಳುಗರಿಗಷ್ಟೇ ಸೇತುವೆಯಾಗಿ ನಿಲ್ಲುತ್ತದೆ. ಚಾಡಿ ಮಾತುಗಳು ಒಂದು ರೀತಿಯಲ್ಲಿ ಸಕ್ಕರೆ ಲೇಪನ ಮಾಡಿದ ವಿಷದ ಗುಳಿಗೆ ಇದ್ದಂತೆ. ಬಾಯಿಗೆ ಸಿಹಿ ಉದರಕ್ಕೆ ಕಹಿ. ಕ್ರಮೇಣ ಇದು ನಿರಪರಾಧಿ ವ್ಯಕ್ತಿಯ ಜೊತೆಗೆ ಚಾಡಿ ಹೇಳುವ, ಕೇಳುಗರನ್ನು ಬಲಿತೆಗೆದುಕೊಳ್ಳುತ್ತದೆ.

ಈ ಚಾಡಿ ಬ್ರಹ್ಮರನ್ನು ಹುಡಿಕಿಕೊಂಡು ದೂರ ಹೋಗಬೇಕಾಗಿಲ್ಲ. ನಮ್ಮ ನೆರೆಹೊರೆಯಲ್ಲಿ, ಅಷ್ಟೇಕೆ ನಮ್ಮ ಮನೆಗಳಲ್ಲೇ ಇದ್ದಾರೆ. ಅತ್ತೆ ಸೊಸೆಯ ಬಗ್ಗೆ ತನ್ನ ಮಗನಿಗೆ ಚಾಡಿ ಹೇಳುವುದು, ಹೆಂಡತಿ ಅತ್ತೆಯ ಬಗ್ಗೆ ನಾದಿನಿಯರ ಬಗ್ಗೆ ಮೈದುನರ ಬಗ್ಗೆ ತನ್ನ ಗಂಡನಿಗೆ ಚಾಡಿ ಹೇಳುವುದು, ಒಂದು ಕಛೇರಿಯ ವ್ಯವಸ್ಥಾಪಕ ಗುಮಾಸ್ತನ ಬಗ್ಗೆ ಅಧಿಕಾರಿಗೆ ಚಾಡಿ ಹೇಳುವುದು, ಗುಮಾಸ್ತ ವ್ಯವಸ್ಥಾಪಕನ ಬಗ್ಗೆ ಹೀಗೆ ಚಾಡಿ ಹೇಳುವವರ ಪಟ್ಟಿ ಬೆಳೆಯುತ್ತಲೇ ಹೋಗುತ್ತದೆ. ಇಂದು ಎಲ್ಲಾ ಕ್ಷೇತ್ರಗಳಲ್ಲಿಯೂ ಇಂತಹ ಚಾಡಿಕೋರ ಬ್ರಹ್ಮರು ತುಂಬಿ ಹೋಗುತ್ತದೆ. ಚಾಡಿ ಹೇಳುವವರಿಗೆ, ತಾತ್ಕಾಲಿಕವಾಗಿ ಸಂತೋಷ ದೊರೆತರೂ ಕ್ರಮೇಣ ಅದು ವ್ಯಕ್ತಿಗಳ ಮಾನಸಿಕ, ಬೌದ್ಧಿಕ ಬೆಳವಣಿಗೆಗೆ ಕುಂಠಿತವಾಗುತ್ತದೆ. ಈ ಕೆಟ್ಟಗಾಳಿ ಕೇಳುಗರ ಮೇಲೂ ಪರಿಣಾಮವನ್ನುಂಟುಮಾಡುತ್ತದೆ. ಚಾಡಿ ಕೇಳುವ ವ್ಯಕ್ತಿ ಯಾರ ಬಗ್ಗೆ ಚಾಡಿ ಹೇಳುತ್ತಾನೋ ಅವರಿಬ್ಬರ ನಡುವಿನ ಸಂಬಂಧವನ್ನು ಅರ್ಥಮಾಡಿಕೊಳ್ಳುವುದರ ಜೊತೆಗೆ ಪ್ರತ್ಯಕ್ಷವಾದರೂ ಪ್ರಮಾಣೀಕರಿಸಿ ನೋಡುವ ಮನೋಭಾವವನ್ನು ಬೆಳೆಸಿಕೊಳ್ಳಬೇಕು. ಇದರಿಂದ ಒಬ್ಬ ಪ್ರಾಮಾಣಿಕ ವ್ಯಕ್ತಿಗೆ ನ್ಯಾಯ ದೊರಕಿಸಿಕೊಟ್ಟಂತಾಗುತ್ತದೆ.

ಜನಪದ ಸಾಹಿತ್ಯದಲ್ಲೂ ಇಂತಹ ಅನೇಕ ಪ್ರಸಂಗಗಳು ದೊರೆಯುತ್ತವೆ. ಒಂದು ಪುಟ್ಟ ಸಂಸಾರ. ಸಾಮರಸ್ಯದಿಂದ ಕೂಡಿದ ದಾಂಪತ್ಯ ಜೀವನ. ಇದನ್ನು ಕಂಡು ಸಹಿಸಲಾರದ ಪಕ್ಕದ ಮನೆ ಗೆಳತಿಯೊಬ್ಬಳು ಆ ದಂಪತಿಗಳ ಮಧ್ಯೆ ವಿಷಬೀಜವನ್ನು ಬಿತ್ತುವುದಕ್ಕೆ ಪ್ರಯತ್ನಿಸುತ್ತಾಳೆ.

ಚಿಂತಾಕು ಇಟುಕೊಂಡು ಚಿಪ್ಪಾಟ ಬಳಿವಾಕೆ
ಚಿಂತಿಲ್ಲವೇನ ನಿನಗಿಷ್ಟು—ನಿನಗಂಡ
ಅಲ್ಲೊಬ್ಬ ಕೂಡಿ ನಗುತ್ತಿದ್ದ.

ಎಂದು ಹೇಳಿ ಆ ಗೃಹಿಣಿಯು ತಿಳಿಯಾಗಿದ್ದ ಮನಸ್ಸನ್ನು ಕೆಸರಾಗಿಸಲು ಹವಣಿಸುತ್ತಾಳೆ. ಅದಕ್ಕೆ ಆ ಸುಸಂಸ್ಕೃತ ಹೆಣ್ಣು

ನಕ್ಕರೆ ನಗಲೇಳೆ ನಗೆ ಮುಖದಕ್ಕಾದಿಗೆ
ನಾ ಮುಂಚೆ ಮುಡಿದ ಪರಿಮಳದ—ಹೂವ
ಅವಳೊಂದು ಗಳಿಗೆ ಮುಡಲೇಳೆ.

ಎಂದು ಹೇಳಿ ಚಾಡಿ ಹೇಳಲು ಬಂದವಳಿಗೆ, ಮಾತಿನ ಚಾಟಿಯಿಂದ ಹೊಡೆದು ಮುಖಭಂಗ ಮಾಡಿ ಕಳಿಸುತ್ತಾಳೆ. ಒಂದು ಮಾತಂತೂ ಸತ್ಯ ಎಲ್ಲಿಯವರೆಗೆ ಸಮಾಜದಲ್ಲಿ ಚಾಡಿ ಕೇಳುವ ಹಿತ್ತಾಳೆ ಕಿವಿಯವರು ಇರುತ್ತಾರೆಯೋ ಅಲ್ಲಿಯವರೆಗೆ ಚಾಡಿ ಹೇಳುವವರು ಪಾರ್ಥೇನಿಯಂ ಕಳೆಯಂತೆ ಬೆಳೆಯುತ್ತಲೇ ಇರುತ್ತಾರೆ.





# ವಿಜ್ಞಾನ ವಿಶ್ವ

—ಪ. ರಾಮಕೃಷ್ಣ ಶಾಸ್ತ್ರಿ.

ಪಶ್ಚಿಮ ಜರ್ಮನಿಯ ಒಂದೆಡೆ ಒಂದು ಕೋಣೆಯಲ್ಲಿ ಕೊಲೆಯಾಗಿದೆ — ಎಂದು ಶಂಕೆಯಿಂದ ತಜ್ಞರು ಅಲ್ಲಿ ಹುಡುಕುತ್ತಿದ್ದಾರೆ. ಆದರೆ ಅಲ್ಲಿ ಏನೂ ಕುರುಹು ಸಿಗಲಿಲ್ಲ. ಆಗ 'ಥರ್ಮೋಗ್ರಾಫ್' ಎಂಬ ವಿಶೇಷ ಕ್ಯಾಮರಾದಿಂದ ಆ ಕೋಣೆಯ ಚಿತ್ರ ತೆಗೆದಾಗ ನೆಲಕ್ಕೆ ಹಾಸಿದ ಬೆಡ್‌ಷೀಟಿನ ಮೇಲೆ ಒಬ್ಬ ವ್ಯಕ್ತಿ ಮಲಗಿದ್ದ ಸ್ಪಷ್ಟ ಆಕೃತಿ ಚಿತ್ರದಲ್ಲಿ ಮೂಡುತ್ತದೆ.

ಅಮೇರಿಕದ ಯುವಕನೊಬ್ಬ ತನ್ನ ಪತ್ನಿಯು ಪರಪುರುಷನೊಂದಿಗೆ ಮಲಗಿದ್ದಳೆಂಬ ಆರೋಪ ಹೂಡಿ ಕೋರ್ಟಿನಲ್ಲಿ ವಿವಾಹ ವಿಚ್ಛೇದನೆಗೆ ಅರ್ಜಿ ಹಾಕಿದ. ಅವಳು ಆರೋಪವನ್ನು ನಿರಾಕರಿಸಿದಳು. ಥರ್ಮೋಗ್ರಾಫ್‌ನಿಂದ ಅವಳ ಕೋಣೆಯ ಫೋಟೊ ತೆಗೆದಾಗ ಆ ಫೋಟೊ ನೋಡಿ ಅವಳು ಕಂಗೆಟ್ಟಳು. ಅವಳ ಬಳಿ ಅನ್ಯಪುರುಷನೊಬ್ಬ ಮಲಗಿದ್ದ ಸ್ಪಷ್ಟ ಸಾಕ್ಷ್ಯ ಚಿತ್ರದಲ್ಲಿತ್ತು.

ಭೂತಕಾಲದಲ್ಲಿ ಆ ವ್ಯಕ್ತಿಗಳು ಆ ಕೋಣೆಯಲ್ಲಿದ್ದುದು ದಿಟ. ಅದನ್ನೇ ಎಷ್ಟೋ ಸಮಯದ ಮೇಲೆ ಫೋಟೋ ಹಿಡಿದು ತೋರಿಸುವ ಥರ್ಮೋಗ್ರಾಫ್‌ನ ಸಾಹಸ ನಿಜಕ್ಕೂ ಅಚ್ಚರಿ ತರುವಂಥದು. ಒಂದು ಸ್ಥಳದಿಂದ ವ್ಯಕ್ತಿ ಹೊರಟು ಹೋದ ಮೇಲೂ ಅವನ ಉಷ್ಣದ ಛಾಯೆ ಬಹುಕಾಲ ಅಲ್ಲಿಯೇ ಅಸ್ತಿತ್ವದಲ್ಲಿ ಉಳಿಯುವುದು. ಆ ಶಾಖಾಂಶವನ್ನು ಗುರುತಿಸಿ ಥರ್ಮೋಗ್ರಾಫ್ ಫೋಟೋ ತೆಗೆಯುತ್ತದೆ.

ಎರಡನೆಯ ಮಹಾಯುದ್ಧದ ಕಾಲದಲ್ಲಿ ಶತ್ರುಗಳ ಗೋಪ್ಯಗಳನ್ನು ತಿಳಿದುಕೊಳ್ಳುವ ಸಲುವಾಗಿ ಥರ್ಮೋಗ್ರಾಫನ್ನು ಶೋಧಿಸಲಾಯಿತು. ಶತ್ರು ದೇಶಗಳಲ್ಲಿ ವಿಮಾನ ಧಾಳಿಯ ಭಯದಿಂದ ಕಾರ್ಖಾನೆಗಳನ್ನು ಅಗೋಚರ ಸ್ಥಳಗಳಲ್ಲಿ ನಡೆಸುತ್ತಿದ್ದರು. ಗಿಡ, ಮರ, ಬಳ್ಳಿಗಳಿಂದಾವರಿಸಿದ ಅರಣ್ಯಗಳಲ್ಲಿ ಶತ್ರುಸೇನೆಗಳು ಹುದುಗಿಕೊಂಡು ಕೂಟಯುದ್ಧ ಮಾಡುತ್ತಿದ್ದುವು. ಆದರೆ ಬೆಳಕನ್ನು ಮುಚ್ಚಿಡಬಹುದಾದರೂ ಅವರ ಉಷ್ಣಾಂಶವನ್ನು ಮುಚ್ಚಿಡಲು ಅಸಾಧ್ಯ. ಟೆಲಿವಿಷನ್ ಕ್ಯಾಮರಾವನ್ನು ಹೋಲುವ ಥರ್ಮೋಗ್ರಾಫ್ ಫೋಟೋ ತೆಗೆಯಲು ಬೆಳಕೇ ಬೇಡ.

ಪದಾರ್ಥ ಯಾವುದಾದರೂ ಸ್ವಲ್ಪ ಉಷ್ಣಾಂಶವನ್ನು ಬೀರದಿರುವುದಿಲ್ಲ. ಪರಿಸರದ ಪದಾರ್ಥಗಳು ಬೀರುವ ಶಾಖಕ್ಕಿಂತ ಅಡಗಿರುವ ವಸ್ತು ಬೀರುವ ಶಾಖ ಹೆಚ್ಚು-ಕಡಿಮೆಯಿದ್ದರೂ ಥರ್ಮೋಗ್ರಾಫಿನ ಚಿತ್ರಗಳಲ್ಲಿ ಸ್ಪಷ್ಟವಾಗಿ ಗುರುತಿಸಬಹುದಾಗಿದೆ. ಗಸ್ತಿ ವಿಮಾನಗಳಿಗೆ ಅದನ್ನು ಜೋಡಿಸಿದಾಗ ಬೆಳಕಿನಂತೆ ತರಂಗಗಳಾಗಿ ಪ್ರಸರಣ ಹೊಂದುವ ಉಷ್ಣಾಂಶವನ್ನು ಬೆಳಕಾಗಿ ಮಾರ್ಪಡಿಸಿ, ರಾತ್ರಿ ಜ್ಯೋತ್ಸ್ನೆಯಲ್ಲಾದರೂ ಕಾರ್ಖಾನೆ ನಡೆಯುವ ಸ್ಥಳಗಳನ್ನು ಗುರುತಿಸಬೇಕೆಂದು ಈ ಸೂಕ್ಷ್ಮ ಕ್ಯಾಮರಾದ ನಿರ್ಮಾಣವಾಗಿದೆ.

ಜಲಜನಕ ಪರಮಾಣುಗಳೂ ಸ್ತಬ್ಧವಾಗುವ -೨೭೩ ಡಿಗ್ರಿಗಿಂತ ಕಡಿಮೆಯಿರುವ ಸ್ಥಿತಿಯಲ್ಲಿ ಮಾತ್ರ ಯಾವ ಪದಾರ್ಥಗಳೂ ಉಷ್ಣವನ್ನು ಬೀರುವುದಿಲ್ಲ. ಅಂಥ ಪದಾರ್ಥಗಳ ಹೊರತು, ನೀರು ಘನೀಭೂತವಾಗಿ ಗಡ್ಡೆಗಟ್ಟಿದರೂ ಕೂಡ ಉಷ್ಣಾಂಶವಿರುತ್ತದೆ. ಥರ್ಮೋಗ್ರಾಫ್‌ನಲ್ಲಿ ಉದ್ದ ಮತ್ತು ಓರೆಯಾಗಿ ಜೋಡಿಸಿದ ಕನ್ನಡಿಗಳು ಉಷ್ಣ ಪ್ರಸರಣದ 'ಇನ್‌ಫ್ರಾರೆಡ್' ಕಿರಣಗಳನ್ನು ಗ್ರಹಿಸಿ ಚಿತ್ರ ತೆಗೆಯಲು ಸಮರ್ಥವಾಗಿವೆ. ತನ್ನ ಎದುರಿರುವ ವಸ್ತು ಎಷ್ಟೇ ಅತ್ಯಲ್ಪ ಉಷ್ಣಾಂಶವನ್ನು ಬೀರುತ್ತಿದ್ದರೂ, ಆ ಉಷ್ಣ ಪ್ರವಾಹವನ್ನು ವಿದ್ಯುತ್ ಧಾರೆಗಳಾಗಿ ಮಾರ್ಪಡಿಸಿ, ಆ ಪ್ರಕಾಶ ಕಿರಣಗಳಲ್ಲಿ ಕಂಡುಬಂದ ವಸ್ತುವಿನ ಶಾಖದ ಚಿತ್ರವನ್ನು ಫೋಟೋ ಫಿಲ್ಮಿನ ಮೇಲೆ ಸೆರೆ ಹಿಡಿಯುವುದು.

ವಿಜ್ಞಾನದ ರೀತ್ಯಾ ಏಳು ವರ್ಣಗಳನ್ನೊಳಗೊಂಡ ಬಿಳುಪು ಬೆಳಕಿನಲ್ಲಿ ಬಿದ್ದ ಪದಾರ್ಥಗಳು ಮಾತ್ರ ಮನುಷ್ಯನ ಕಣ್ಣಿಗೆ ಕಾಣಿಸುತ್ತವೆ. ಆದರೆ ಥರ್ಮೋಗ್ರಾಫಿಗೆ ಸಾಮಾನ್ಯ ಕ್ಯಾಮರಾಕ್ಕೆ ಅಗತ್ಯವಿರುವಷ್ಟು ಬೆಳಕೂ ಬೇಡ. ಪದಾರ್ಥದ ಉಷ್ಣಾಂಶವನ್ನೇ ಗುರುತಿಸಿ ಚಿತ್ರ ತೆಗೆಯುವ ಅದರ ಕಾರ್ಯಾಚರಣೆಗೆ ರಾತ್ರಿಯಲ್ಲಾಗಲೀ ಮೋಡ ಕವಿದ ವಾತಾವರಣದಲ್ಲಾಗಲೀ ಆತಂಕ ಬಾರದು. ಅದರಲ್ಲಿ ಹೆಚ್ಚು ಉಷ್ಣವಿರುವ ಸ್ಥಳ ಅತಿ ಬಿಳಿ ಅಥವಾ ಕೆಂಪು; ಶಾಖ ಕಮ್ಮಿಯಿರುವ ಪ್ರದೇಶ ಕಪ್ಪು ಇಲ್ಲವೇ ನೀಲಿ ವರ್ಣದಲ್ಲಿ ಸ್ಪಷ್ಟವಾಗುತ್ತದೆ. ಉಷ್ಣಾಂಶ ಹೆಚ್ಚು ಕಡಿಮೆಯಿರುವ ಪ್ರದೇಶಗಳನ್ನೇ ತಜ್ಞರು ನೋಡಿ ಅದರ ಅರ್ಥ ವ್ಯಾಖ್ಯೆಯನ್ನು ಮಾಡುತ್ತಾರೆ. ಅಡಗಿದ ಶತ್ರು ಸೈನಿಕರನ್ನಷ್ಟೇ ಅಲ್ಲ, ಅಗಾಧ ಕಾಡಿನಲ್ಲಿ ಎಸೆದ ಸಾಸಿವೆ ಕಾಳನ್ನಾದರೂ ಕೂಡಲೆ ಅವರು ಗುರುತಿಸಬಲ್ಲರು. ಥರ್ಮೋಗ್ರಾಫಿನ ಚಿತ್ರಗಳಲ್ಲಿರುವ ಪ್ರತಿ ಬಣ್ಣವೂ ಉಷ್ಣಾಂಶದ ಸೂಚಕವಾಗಿದೆ. ಅತ್ಯಧಿಕ ಉಷ್ಣ ಪ್ರದೇಶದ ಸೂಚಕ ಕೆಂಪು ಹಾಗೂ ಕಿತ್ತಳೆ ವರ್ಣ. ಉಷ್ಣತೆ ಶೂನ್ಯಾಂಶಕ್ಕೆ ಸಮೀಪವಿದ್ದರೆ ಹಳದಿ.



ದ್ವಿತೀಯ ವಿಶ್ವಯುದ್ಧದಲ್ಲಿ ಥರ್ಮೋಗ್ರಾಫ್‌ನಿಂದ ಶತ್ರುಪಡೆಗಳು ಠಾಣ್ಯ ಹೂಡಿದ್ದ ಪ್ರದೇಶಗಳನ್ನು ಗುರುತಿಸಲಾಯಿತು. ವಿಯೆಟ್ನಾಂ ಯುದ್ಧದ ಅನೇಕ ಗೆರಿಲ್ಲಾ ಯುದ್ಧತಂತ್ರಗಳ ಚಲನ ವಲನ ಹಾಗೂ ಶಸ್ತ್ರಾಸ್ತ್ರ ಸಂಗ್ರಹಗಳನ್ನು ಅದು ಪತ್ತೆ ಮಾಡಿತು. ಯುದ್ಧ ಕ್ಷಿಪಣಿಗಳಲ್ಲಿ ಥರ್ಮೋಗ್ರಾಫನ್ನು ಜೋಡಿಸಿ, ನೂರಾರು ಮೈಲು ದೂರದಲ್ಲಿದ್ದ ಶತ್ರುವಿಮಾನಗಳನ್ನು ನೇರವಾಗಿ ಉರುಳಿಸಲಾಯಿತು.

ದೂರದೃಶ್ಯ ಗ್ರಹಣ ಶಕ್ತಿಯಿರುವ ಥರ್ಮೋಗ್ರಾಫ್, ಚಂದ್ರನಲ್ಲಿ ಮಾನವ ಇಳಿಯುವ ಮೊದಲೇ 4000 ಮೈಲು ದೂರದಿಂದ ಚಂದ್ರಗ್ರಹದ ಕತ್ತಲು ಪ್ರದೇಶದ ಫೋಟೋ ತೆಗೆದಿದೆ. ಅರಣ್ಯಗಳಲ್ಲಿ ಅಡಗಿದ್ದ ವಿಯೆಟ್ಕಾಂಗಿಗಳನ್ನು ಶೋಧಿಸಲು ಇದರಿಂದ ಎಷ್ಟು ಸುಲಭವಾಯಿತೆಂದರೆ ಕಾಡಿನ ಗಿಡಮರಗಳು ರಕ್ತಾತೀತ ಕಿರಣಗಳನ್ನು ತಡೆದಂತೆ ಬೆಳಕನ್ನು ತಡೆಯುವುದಿಲ್ಲವಾದ್ದರಿಂದ ಅವರ ಪತ್ತೆಯಾಯಿತು. ರಾತ್ರಿಯಲ್ಲಿ ಅವರು ಮೃಗಗಳ ಬಾಧೆಯಿಂದ ರಕ್ಷಿಸಿಕೊಳ್ಳಲು ಉರಿಸುತ್ತಿದ್ದ ಬೆಂಕಿರಾಶಿಯೇ ಥರ್ಮೋಗ್ರಾಫಿನ ಕಣ್ಣಿಗೆ ಅವರನ್ನು ತೋರಿಸಿಕೊಟ್ಟಿತು.

ವಿದ್ಯುತ್ ಕಂಪೆನಿಗಳಲ್ಲಿ ಕಾರ್ಯಾಚರಣೆಯಲ್ಲಿರುವ ವಿದ್ಯುತ್ ಸರಬರಾಜಿನ ಟ್ರಾನ್ಸ್‌ಫಾರ್ಮರುಗಳು ಅಪಾಯಮಟ್ಟದ ಶಾಖಕ್ಕೆ ತಲುಪದಂತೆ ಥರ್ಮೋಗ್ರಾಫ್ ಸಹಾಯಕವಾಗಿದೆ. ವಿಮಾನದ ಬಿಡಿಭಾಗದಲ್ಲಿರುವ ದೋಷಗಳನ್ನು ಗುರುತಿಸಲು ವಿಮಾನಯಾನ ಸಂಸ್ಥೆಗಳು ಇದನ್ನು ಧಾರಾಳವಾಗಿ ಉಪಯೋಗಿಸಿಕೊಳ್ಳುತ್ತವೆ.

ಭೂತಕಾಲದ ಚಿತ್ರಗಳನ್ನು ಸೆರೆಹಿಡಿಯುವ ವರ್ತಮಾನದ ದೃಶ್ಯಗಳನ್ನು ತೋರಿಸುವ ಥರ್ಮೋಗ್ರಾಫ್ ಭವಿಷ್ಯತ್ಕಾಲವನ್ನೂ ಕಾಣಬಲ್ಲದು.

ವೈದ್ಯಕೀಯ ಕ್ಷೇತ್ರದಲ್ಲಿ ರೋಗ ಮೂಲವನ್ನು ಗುರುತಿಸಲು ಥರ್ಮೋಗ್ರಾಫ್ ನಿಂದ ಸಾಧ್ಯವಾಗಿದೆ. ಶರೀರದ ಒಂದು ಭಾಗ ಇನ್ನೊಂದು ಭಾಗಕ್ಕಿಂತ ಬೆಚ್ಚಗೆ ಅಥವಾ ತಂಪಾಗಿದ್ದರೆ ಅದು ರೋಗ ಬರಲಿರುವ ಮುನ್ಸೂಚನೆ ಎಂದು ವೈದ್ಯಶಾಸ್ತ್ರದ ಪಿತಾಮಹಾ ಹಿಪ್ಪೋಕ್ರೇಟ್ಸ್ ಹೇಳಿದ್ದಾನೆ. ಆದರೆ ಹಿಪ್ಪೋಕ್ರೇಟ್ಸ್‌ನ ಸಿದ್ಧಾಂತ ತಲೆಕೆಳಗಾಗಿದೆ. ನಮ್ಮ ಮೂಗು ಅತಿ ತಣ್ಣಗಿದೆ. ಅಂದರೆ ಅದು ರೋಗದ ಲಕ್ಷಣವಲ್ಲ. ಹೀಗಿರುವಾಗ ಶರೀರದ ಅಂಗಾಂಗಗಳಲ್ಲಿ ಇರುವ ಉಷ್ಣದ ಅಂತರಗಳು ರೋಗವನ್ನು ಸೂಚಿಸುತ್ತವೆನ್ನುವ ಆಧುನಿಕ ವಿಜ್ಞಾನದಲ್ಲಿ ಉಷ್ಣದ ಅಂತರವನ್ನು ದೇಹದಿಂದ ಗುರುತಿಸುವ ಸಾಧನಗಳಿರಲಿಲ್ಲ. ಈಗ ಥರ್ಮೋಗ್ರಾಫ್ ತೆಗೆಯುವ ಶರೀರದ ಉಷ್ಣತರಂಗಗಳ ಚಿತ್ರಗಳಿಂದ ಈ ಏರುಪೇರುಗಳು ಸ್ಪಷ್ಟವಾಗಿ ಗೋಚರಿಸುತ್ತವೆ. ಅದರ ಸಹಾಯದಿಂದ ವಿವಿಧ ಅಂಗಗಳ ಅಂತರಗಳು ಗೊತ್ತಾ

ಗುತ್ತವೆ. ಉಷ್ಣಾಂಶವುಳ್ಳ ಭಾಗಗಳು ಬೆಳ್ಳಗಾಗಿಯೂ ತಣ್ಣಗಿರುವ ಭಾಗಗಳು ಕಪ್ಪಾಗಿಯೂ ಕಾಣುವ ಛಾಯೆಗಳು ಒಂದು ಅಳತೆಗೋಲಿನಂತಿವೆ.

ದೇಹದಲ್ಲಿ ಯಾವ ಭಾಗದಲ್ಲಾದರೂ ಶಾಖ ಹೆಚ್ಚು ತೋರಿದರೆ, ತಂಪಾಗಿದ್ದರೆ ವಿವಿಧ ಅರ್ಥಗಳನ್ನು ವೈದ್ಯರು ಗುರುತಿಸುತ್ತಾರೆ. ನರಗಳಿಗೆ ಧಕ್ಕೆಯಾಗಿದ್ದರೆ ಆ ಭಾಗ ತಂಪೇರುವುದು. ಬೆರಳುಗಳೆಲ್ಲ ತಂಪೇರಿದರೆ ಅದು ರಕ್ತನಾಳಗಳ ದೋಷಗಳ ಸೂಚಕ. (ಆದರೆ ಸಿಗರೇಟು ಸೇದುವುವವರ ಬೆರಳುಗಳು ತಣ್ಣಗಿರುವ ವಿಚಿತ್ರದ ರಹಸ್ಯ ಗೊತ್ತಾಗಿಲ್ಲ.)

ಸ್ತ್ರೀಯರ ಅಂಡಾಶಯ, ಮೊಲೆಗಳು, ಗರ್ಭಕೋಶಗಳ ಕ್ಯಾನ್ಸರ್‌ಗಳನ್ನು, ಚರ್ಮ ವ್ಯಾಧಿಗಳನ್ನು ಮುಂಬರುವ ಇತರ ಅಸಂಖ್ಯ ರೋಗಗಳನ್ನು ಎಷ್ಟೋ ಮೊದಲೇ ತಿಳಿಸುವುದಕ್ಕೆ ಮತ್ತು ತಕ್ಕ ಚಿಕಿತ್ಸೆ ಕೈಗೊಳ್ಳಲು ಥರ್ಮೋಗ್ರಾಫ್‌ನ ವೈದ್ಯಕೀಯ ರೂಪವಾದ 'ಥರ್ಮೋವಿಷನ್' ಸಹಕಾರಿಯಾಗಿದೆಯೆಂದು ಲಾಸ್ ಏಂಜಲೀಸಿನ ಪ್ರೊ॥ ಟ್ರಾವಿಸ್ ವಿನ್ಸನ್ ತಿಳಿಸಿದ್ದಾರೆ. ಅಭಿಧಮನಿಗಳಲ್ಲಿ ನೆತ್ತರಿನ "ಥ್ರಾಂಬ್" ಗಳು ಸಿಕ್ಕಿಕೊಂಡಿದ್ದರೆ ಪರಿಸರ ಬಿಸಿಯೇರುತ್ತದೆ. ಮುಖದ ಮೇಲಿನ ಶುದ್ಧ ರಕ್ತನಾಳಗಳಲ್ಲಿ ವಿಸಂಧಿಯುಂಟಾದರೆ ಪರಿಸರ ತಂಪಾಗುವುದು. ಇದು ಮುಂದೆ ಅರ್ಧಾಂಗವಾಯು ರೋಗ ಬರಲಿದೆಯೆಂಬ ಭವಿಷ್ಯದ ಸೂಚನೆಯನ್ನು ನೀಡುವುದು. ಇಂದು ಅಗೋಚರವಾಗಿದ್ದು, ನಾಳೆಗೆ ಗಂಭೀರ ರೂಪದಲ್ಲಿ ಕಾಣಿಸಿಕೊಳ್ಳಬಹುದಾದ ರೋಗಗಳ ಬೆಳವಣಿಗೆಯನ್ನು ಥರ್ಮೋಗ್ರಾಫಿನ ಕ್ಷ-ಕಿರಣ ಫೋಟೋಗಳು ಗೊತ್ತು ಹಚ್ಚುತ್ತವೆ. ಅಪರಾಧ ಪತ್ತೇದಾರಿ ಪ್ರಸಂಗಗಳಲ್ಲಿ ಥರ್ಮೋಗ್ರಾಫ್ ಆಶ್ಚರ್ಯಗಳನ್ನು ಸಾಧಿಸತೊಡಗಿದೆ. ಕಳ್ಳ ಸಾಗಾಣಿಕೆದಾರರು ಸಾಗಿಸುವ-ಸಾಗಿಸಿದ ಅಫೀಮು, ಬಂಗಾರ ಇತ್ಯಾದಿಗಳ ಫೋಟೋಗಳನ್ನು ಎಷ್ಟೋ ತಿಂಗಳ ಅನಂತರವೂ ಅದು ಹಿಡಿದು ಕೊಡುತ್ತದೆ. ಕೊಲೆ, ದರೋಡೆ ಪತ್ತೆಗಳಲ್ಲಿ ಅದನ್ನು ಸುಸಂಬದ್ಧವಾಗಿ ಬಳಸುತ್ತಿದ್ದಾರೆ. ಅಪರಾಧಿಗಳು ತಮ್ಮ ಕುರುಹು ಮುಚ್ಚಲು ಯಾವ ಪ್ರಯತ್ನವೆಸಗಿದರೂ ಅದರ ಕಣ್ಣಿನಿಂದ ತಪ್ಪಿಸಿಕೊಳ್ಳಲಾರರು. ನಿನ್ನೆ ನಡೆದುದನ್ನು, ಈಗ ನಡೆಯುತ್ತಿರುವುದನ್ನು, ನಾಳೆ ನಡೆಯಲಿರುವುದನ್ನು ಕಾಣಲು ವಿಜ್ಞಾನ ಸಾಧಿಸಿದ ಒಂದು ಅತ್ಯದ್ಭುತ ಇದು.

---

"ಸರ್ವೇ ಸುಖಿನಃ ಸಂತು ಸರ್ವೇ ಸಂತು ನಿರಾಮಯಾಃ"
ಎಲ್ಲರೂ ಸುಖದಿಂದ ಇರಲಿ ; ಎಲ್ಲರೂ ನಿರೋಗಿಗಳಾಗಿರಲಿ.

---



# ಪುಸ್ತಕಗಳು ಮತ್ತು ಓದುವ ಹವ್ಯಾಸ

—ತ್ರಿವಿಕ್ರಮ

"ಹಳೆಯ ಕೋಟನ್ನು ತೊಡು; ಹೊಸ ಪುಸ್ತಕವನ್ನು ಓದು" ಎಂದು ಇಂಗ್ಲೀಷ್‌ನಲ್ಲಿ ಒಂದು ಪ್ರಸಿದ್ಧ ಗಾದೆಯಿದೆ. ವಿದ್ಯಾವಂತನಾದವನು ತನ್ನ ಉಡುಗೆ, ತಿಂಡಿ ತೀರ್ಥಗಳಿಗೆ ಅಷ್ಟಾಗಿ ಗಮನ ಕೊಡದಿದ್ದರೆ ಅದರಿಂದ ಯಾವ ನಷ್ಟವೂ ಸಂಭವಿಸಲಾರದು. ಆದರೆ ಅವನು ಕಾಲಕಾಲಕ್ಕೆ ಪ್ರಕಟವಾಗುತ್ತಿರುವ ಹೊಸ ಪುಸ್ತಕಗಳನ್ನು ಓದಿ ತನ್ನ ಜ್ಞಾನ ಭಂಡಾರವನ್ನು ವಿಸ್ತರಿಸುತ್ತಾ ಇರಬೇಕಾದ್ದು ತುಂಬಾ ಅಗತ್ಯವೆಂದು ಈ ಗಾದೆ ಸ್ಪಷ್ಟವಾಗಿ ತಿಳಿಸುತ್ತದೆ. 'ನಹಿ ಜ್ಞಾನೇನ ಸದೃಶಂ, ಪವಿತ್ರ ಮಿಹವಿದ್ಯತೇ। ಶ್ರದ್ಧಾವಾನ್ ಲಭತೇ ಜ್ಞಾನಂ' ಎಂದು ಭಗವದ್ಗೀತೆ ಸಾರುತ್ತದೆ. ಇದೇ ವಾಕ್ಯಗಳನ್ನು ನಮ್ಮ ಪ್ರಾಚೀನ ಜ್ಞಾನ ಭಂಡಾರಗಳಾದ ವೇದೋಪನಿಷತ್ತುಗಳೂ ಘಂಟಾ ಘೋಷವಾಗಿ ಹೇಳುತ್ತವೆ. 'ಮಾನವ ಜನ್ಮ ದೊಡ್ಡದು. ಇದ ಹಾಳುಮಾಡಲು ಬೇಡಿ ಹುಚ್ಚಪ್ಪಗಳಿರಾ' ಎಂದು ದಾಸಶ್ರೇಷ್ಠ ಪುರಂದರದಾಸರು ಇಡೀ ಮಾನವ ಕೋಟಿಯನ್ನೇ ಎಚ್ಚರಿಸಿದ್ದಾರೆ, ದೇವರಧ್ಯಾನ ಪೂಜೆ ಇವುಗಳನ್ನು ಮಾಡುವುದರ ಜೊತೆಗೇ ಮಾನವನೂ ಅಪೂರ್ವವಾದ ಜ್ಞಾನ ಸಂಪತ್ತನ್ನೂ ಅರ್ಜಿಸಬೇಕೆಂಬುದೇ ಅವರ ಈ ಹೇಳಿಕೆಯ ಅಂತರಾರ್ಥವಾಗಿದೆ. ಗ್ರೀಸ್ ದೇಶದ ಪ್ರಸಿದ್ಧ ತತ್ವಜ್ಞಾನಿ ಸಾಕ್ರೇಟೀಸ್ ಕೂಡ ಜ್ಞಾನದ ಮಹತ್ವವನ್ನು ತನ್ನದೊಂದು ಪ್ರಸಿದ್ಧ ಹೇಳಿಕೆಯಲ್ಲಿ ಹೀಗೆ ಪ್ರತಿಪಾದಿಸಿದ್ದಾನೆ. "Knowledge is Power" (ಜ್ಞಾನವೇ ಮನುಷ್ಯನ ಶಕ್ತಿ) ಎಂದು ಆ ತತ್ವಜ್ಞಾನಿ ಸಾವಿರಾರು ವರ್ಷಗಳ ಹಿಂದೆಯೇ ಇಡೀ ಮಾನವ ಕುಲಕ್ಕೆ ಸಾರಿ ಹೇಳಿದ್ದಾನೆ. ಜ್ಞಾನ ಅರ್ಥಾತ್ ವಿದ್ಯೆ ಮನುಷ್ಯನು ಈ ಪ್ರಪಂಚದಲ್ಲಿ ಆರ್ಜಿಸಬಹುದಾದ ಅಪೂರ್ವ ಸಂಪತ್ತಾಗಿದೆ. ವಿವೇಕವಂತನಾಗಿ ಮತ್ತು ತನ್ನ ಸಮಾಜಕ್ಕೆ ಉಪಕಾರಿಯಾಗಿ ಬಾಳಬೇಕೆಂಬ ಧ್ಯೇಯವನ್ನಿಟುಕೊಂಡಿರುವ ಪ್ರತಿಯೊಬ್ಬ ಮನುಷ್ಯನು ಶ್ರದ್ಧಾಭಕ್ತಿಗಳಿಂದ ಜ್ಞಾನಾರ್ಜನೆ ಮಾಡಬೇಕಾದ್ದು ತುಂಬಾ ಅಗತ್ಯವಾಗಿದೆ ಇದಕ್ಕಾಗಿ ಅವನು ಓದುವ ಹವ್ಯಾಸವನ್ನು ಬೆಳೆಸಕೊಳ್ಳಬೇಕಾಗುತ್ತದೆ.

ಆದರೆ ದುರ್ದೈವದಿಂದ ನಮ್ಮ ರಾಷ್ಟ್ರದಲ್ಲಿ ವಿದ್ಯಾವಂತರ ಸಂಖ್ಯೆಯೇ ತೀರಾ ಕಡಿಮೆಯಾಗಿದೆ. ಇಂದಿಗೂ ಅಕ್ಷರಸ್ಥರ ಸಂಖ್ಯೆ ಶೇಕಡ ಮೂವತ್ತನ್ನು ದಾಟದೇ ಇರುವುದು ತುಂಬಾ ನಾಚಿಕೆ ಗೇಡಿನ ಸಂಗತಿಯಾಗಿದೆ. ನಮ್ಮ ರಾಷ್ಟ್ರದ ಒಟ್ಟು

ಜನಸಂಖ್ಯೆಯಲ್ಲಿ ಶೇಕಡ ಅರವತ್ತಕ್ಕಿಂತ ಹೆಚ್ಚು ಜನರು ಇನ್ನೂ ಅನಕ್ಷರಸ್ಥರಾಗಿಯೇ ಉಳಿದು ಹೋಗಿದ್ದಾರೆ. ಅವರೆಲ್ಲರೂ ವಿದ್ಯಾವಂತರಾಗುವುದು ಯಾವ ಕಾಲಕ್ಕೋ ಎಂದು ತುಂಬಾ ವಿಷಾದದಿಂದ ಹೇಳಬೇಕಾಗಿದೆ. ಹೀಗೆ ವಿದ್ಯಾವಂತರು ಅನ್ನಿಸಿಕೊಂಡಿರುವ ಜನರಲ್ಲಿಯೂ ಅರ್ಧಕ್ಕಿಂತ ಹೆಚ್ಚು ಜನರಲ್ಲಿ ಓದುವ ಹವ್ಯಾಸವೇ ಇಲ್ಲದಿರುವುದು ತುಂಬಾ ಸೋಜಿಗದ ಸಂಗತಿಯಾಗಿದೆ. ಕೇವಲ ಉದ್ಯೋಗ ಸಂಪಾದನೆಗಾಗಿಯೇ ವಿದ್ಯಾವಂತರಾಗುವವರ ಸಂಖ್ಯೆಯೇ ನಮ್ಮಲ್ಲಿ ಜಾಸ್ತಿಯಾಗಿದೆಯೇ ಹೊರತು ವಿದ್ಯೆ ಅಥವಾ ಜ್ಞಾನಾರ್ಜನೆ ಮಾಡಬೇಕೆಂಬ ಆಸಕ್ತಿ ಅಥವಾ ಗ್ರಂಥಗಳನ್ನು ವ್ಯಾಸಂಗ ಮಾಡುವ ಒಳ್ಳೆಯ ಹವ್ಯಾಸವನ್ನು ಬೆಳಸಿಕೊಂಡಿರುವವರ ಸಂಖ್ಯೆ ಶೇಕಡಾ ಹತ್ತರಷ್ಟೂ ದೊರೆಯಲಾರದೆಂದು ಒಂದು ಅಂದಾಜಿನ ಪ್ರಕಾರ ತಿಳಿದು ಬಂದಿದೆ.

ಅಂದರೆ ಓದು ಬರಹ ಬಲ್ಲವರೂ ತಮ್ಮ ವಿದ್ಯೆಯನ್ನು ಅಥವಾ ತಾವು ಸಂಪಾದಿಸಿರುವ ಜ್ಞಾನವನ್ನು ತಮ್ಮ ದೈನಂದಿನ ವ್ಯವಹಾರಗಳಿಗೆ ಮಾತ್ರ ವಿನಿಯೋಗಿಸುತ್ತಾರೆಯೇ ಹೊರತು ಇನ್ನೂ ಹೆಚ್ಚಿನ ಜ್ಞಾನಾರ್ಜನೆಗಾಗಿ ಬಳಸುವವರು ಬಹಳ ಕಮ್ಮಿ ಜನರೆಂದು ಹೇಳಿದ ಹಾಗಾಯಿತು. ಹೀಗೆ ಓದುವ ಗೀಳು ಹೆಚ್ಚಿಸಿಕೊಂಡಿರುವವರೆಲ್ಲ ಅನೇಕರು ತಮ್ಮ ಸುತ್ತಮುತ್ತ ನಡೆಯುವ ಜಾಗತಿಕ ವಿದ್ಯಮಾನಗಳನ್ನು ತಿಳಿದುಕೊಳ್ಳುವ ಉದ್ದೇಶದಿಂದ ಸುದ್ದಿ ಸಮಾಚಾರಗಳನ್ನು ತಿಳಿಸುವ ದಿನ ಪತ್ರಿಕೆಗಳನ್ನು ಮಾತ್ರ ಓದುತ್ತಾರೆ. ಮನರಂಜನೆಗಾಗಿ ಚಲನಚಿತ್ರ ಕ್ರೀಡೆ ಮತ್ತು ಕಥೆ ಕಾದಂಬರಿ, ನಿಯತಕಾಲಿಕಗಳಿಗೆ ಶರಣು ಹೋಗುತ್ತಾರೆಯೇ ಹೊರತು ಗ್ರಂಥಾಲಯಗಳಿಗೆ ಹೋಗಿ ಗ್ರಂಥಗಳನ್ನು ಓದುವ ಹವ್ಯಾಸವನ್ನು ಬೆಳಸಿಕೊಂಡಿರುವುದಿಲ್ಲ.

ನಮ್ಮಲ್ಲಿ ವಿದ್ಯಾವಂತರೆನ್ನಿಸಿಕೊಂಡಿರುವವರೂ ಸಹ ಸರ್ಕುಲೇಟಿಂಗ್ ಲೈಬ್ರರಿಗಳಿಗೆ ಸದಸ್ಯರಾಗಿದ್ದುಕೊಂಡು ತಮಗೆ ಮನರಂಜನೆಯನ್ನೊದಗಿಸುವಂಥ ಕಥೆ ಕಾದಂಬರಿಗಳನ್ನೊ ಅಥವಾ ತಮಗೆ ಆಸಕ್ತಿಯಿರುವ ನಿಯತಕಾಲಿಕಗಳನ್ನು ಮನೆಗೆ ತಂದು ಓದಿ ಹಿಂದಿರುಗಿಸುತ್ತಾರೆಯೇ ವಿನಹ, ಪ್ರಪಂಚದಲ್ಲಿರುವ ಶ್ರೇಷ್ಠ ಗ್ರಂಥಗಳನ್ನಾಗಲಿ ಕನ್ನಡ ಸಾಹಿತ್ಯದಲ್ಲಿರುವ ಶ್ರೇಷ್ಠ ಕೃತಿಗಳಲ್ಲಿ ಕೆಲವನ್ನಾದರೂ ಸಂಗ್ರಹಿಸಿ ತಮ್ಮ ಮನೆಯಲ್ಲಿ ತಮ್ಮದೇ ಸ್ವಂತದ ಒಂದು ಸಣ್ಣ ಸರಸ್ವತೀ ಭಂಡಾರವನ್ನಿಟ್ಟುಕೊಳ್ಳಬೇಕೆಂಬ ಆಸೆಯುಳ್ಳವರ ಸಂಖ್ಯೆ ಕೇವಲ ಬೆರಳೆಣಿಕೆಯಷ್ಟು ಮಾತ್ರ ಎಂದು ಧಾರಾಳವಾಗಿ ಹೇಳಬಹುದು.

ಹೀಗೆ ಪುಸ್ತಕಗಳನ್ನು ಎರವಲು ತಂದು ಓದುವ ಜನರಲ್ಲಿಯೂ ಪುಕ್ಕಟೆಯಾಗಿ ಅಂದರೆ ಒಂದು ಪೈಸೇ ಕೂಡಾ ತಮ್ಮ ಕೈಯಿಂದ ಖರ್ಚಾಗದಂತೆ ಸಾರ್ವಜನಿಕ ವಾಚನಾಲಯಗಳಿಂದಲೋ ಅಥವಾ ತಮ್ಮ ಸ್ನೇಹಿತರು ದುಡ್ಡು ಕೊಟ್ಟು ಕೊಂಡಿರುವ ಗ್ರಂಥಗಳನ್ನೋ ಓದಿ ಹಿಂದಿರುಗಿಸುವವರೂ, ಹಾಗೆ ಹಿಂದಿರುಗಿಸದೇ ತಮ್ಮ ಸ್ವಂತ ಗ್ರಂಥ ಭಂಡಾರಗಳಿಗೆ ಸಲೀಸಾಗಿ ಸೇರ್ಪಡೆ ಮಾಡಿಕೊಂಡುಬಿಡುವ ಭಂಡ ಗಿರಾಕಿಗಳಿಗೂ ನಮ್ಮಲ್ಲಿ ಕೊರತೆಯೇನಿಲ್ಲ. ಕನ್ನಡಿಗರಿಗಿರುವ ತಮ್ಮ ಮಾತೃಭಾಷೆಯ ಮೇಲಿನ ನಿರಭಿಮಾನದಂತೆಯೇ, ಅವರಿಗಿರುವ ಪುಕ್ಕಟೆಯಾಗಿ ಪತ್ರಿಕೆ, ಪುಸ್ತಕ ಓದುವ, ಪುಕ್ಕಟೆಯಾಗಿ ಸಂಗೀತ, ನಾಟಕ ಮುಂತಾದ ಮನರಂಜನೆಯ ಲಾಭ ಪಡೆಯುವ ಒಂದು ಕೆಟ್ಟ ಚಟವೂ ಲೋಕಪ್ರಖ್ಯಾತವಾಗಿದೆ.

ಹೀಗಿರುವಾಗ ಜ್ಞಾನಾರ್ಜನೆ ಮಾಡಬೇಕೆಂಬ ಮತ್ತು ತಮ್ಮದೇ ಆದ ಉತ್ತಮ ಗ್ರಂಥಗಳ ಪುಟ್ಟ ಗ್ರಂಥ ಭಂಡಾರವನ್ನು ಹೊಂದಿರಬೇಕೆಂಬ ಉತ್ತಮ ಹವ್ಯಾಸವನ್ನು ಬೆಳೆಸಿಕೊಂಡಿರುವಂಥ ಸದಭಿರುಚಿಯ ವಿದ್ಯಾವಂತರ ಸಂಖ್ಯೆಯೂ ನಮ್ಮಲ್ಲಿ ತೀರಾ ಕಡಿಮೆಯಾಗಿದೆ.

ನಮ್ಮ ರಾಷ್ಟ್ರದಲ್ಲಿ ಉತ್ತಮ ಪುಸ್ತಕಗಳನ್ನು ದುಡ್ಡು ಕೊಟ್ಟು ಕೊಳ್ಳುವುದೂ, ನಮ್ಮ ಸ್ವಂತ ಭಂಡಾರದಲ್ಲಿ ಸಂಗ್ರಹಿಸಿಡುವುದೂ ಇನ್ನೂ ಒಂದು ಸಾಮಾಜಿಕ ಸ್ಥಾನಮಾನದ ಸಂಕೇತವಾಗಿ ಬೆಳೆದು ಬಂದಿಲ್ಲದಿರುವುದು ಒಂದು ದೊಡ್ಡ ಕೊರತೆಯೆಂದೇ ಹೇಳಬಹುದು. ನಮ್ಮ ಸಮಾಜವಲ್ಲಿರುವ ಅನೇಕ ಶ್ರೀಮಂತರು ಶ್ರೇಷ್ಠ ಗ್ರಂಥಗಳನ್ನು ದುಡ್ಡು ಕೊಟ್ಟು ಕೊಳ್ಳುವ ಗೋಜಿಗೆ ಹೋಗುವುದಿಲ್ಲ. ಸ್ವಲ್ಪ ಕಟುವಾಗಿ ಹೇಳುವುದಾದರೆ ಅವರು ಅಂತಹ ಪುಣ್ಯದ ಕೆಲಸ ಮಾಡುವುದಕ್ಕೆ ಮನಸ್ಸು ಮಾಡುವುದಿಲ್ಲ! ಅದರ ಬದಲು ಅವರು ಸಾವಿರಾರು ರೂಪಾಯಿಗಳನ್ನು ತಮ್ಮ ಅನೇಕ ದುಶ್ಚಟಗಳಿಗೆ ನೀರಿನಂತೆ ಖರ್ಚು ಮಾಡುತ್ತಾರೆ. ಸಾವಿರಾರು ರೂಪಾಯಿಗಳನ್ನು ತಮ್ಮ ಆರೋಗ್ಯವನ್ನು ಹಾಳುಮಾಡುವಂತ ಸಿಗರೇಟ್, ಮದ್ಯಪಾನ ಮುಂತಾದ ಕೆಟ್ಟ ಹವ್ಯಾಸಗಳಿಗೆ ಸುರಿದು ಹಣಪೋಲು ಮಾಡುತ್ತಾರೆ. (ಹೀಗೆ ಹಣ ವ್ಯರ್ಥವಾಗಿ ಖರ್ಚಾಗುತ್ತಿರುವುದನ್ನು ನೋಡಿದರೆ ವಿದ್ಯಾವಂತರಾದವರ ಮತ್ತು ಜ್ಞಾನಪಿಪಾಸುಗಳಾದವರ ಮನಸ್ಸಿಗೆ ಸಹಿಸಲಸಾಧ್ಯವಾದ ಯಾತನೆಯುಂಟಾಗುತ್ತದೆ. ಕಣ್ಣೀರಿನ ಕೋಡಿ ಹರಿಯುತ್ತದೆ)

ಇದು ಶ್ರೀಮಂತರ ಹವ್ಯಾಸವಾದರೆ ಮಧ್ಯಮ ವರ್ಗದ ನಿಗದಿಯಾದ ವರಮಾನವಿರುವ ಜನಸಾಮಾನ್ಯರು ತಮ್ಮ ಮನರಂಜನೆಗಾಗಿ ಸಿನಿಮಾ, ನಾಟಕ ಮುಂತಾದ ಅಗ್ಗದ ಬೆಲೆಯ ಮನರಂಜನೆಗಳಿಗೋಸ್ಕರ ತಮ್ಮ ಹಣವನ್ನು ವಿನಿಯೋಗಿಸುತ್ತಾರೆ. (ತಮ್ಮಲ್ಲಿ ಹಣವಿಲ್ಲದಿದ್ದರೂ ತಮ್ಮ ಸ್ನೇಹಿತ ಹತ್ತಿರವೋ

ನೆರೆಹೊರೆಯವರ ಹತ್ತಿರವೊ ಸಾಲವನ್ನಾದರೂ ಮಾಡಿ ತಮ್ಮ ಸಿನಿಮಾ ಚಟವನ್ನು ತೀರಿಸಿಕೊಂಡು ಬಿಡುತ್ತಾರೆ. ತಮ್ಮ ಮನರಂಜನೆಯನ್ನು ಮೊಟಕು ಮಾಡಿ ಅದೇ ಬೆಲೆಗೆ ಒಂದು ಉತ್ತಮ ಪುಸ್ತಕವನ್ನು ಕೊಂಡುಕೊಳ್ಳುವುದಕ್ಕೆ ಖಂಡಿತ ಅವರಿಗೆ ಮನಸ್ಸು ಬರುವುದಿಲ್ಲ.

ತನ್ನ ಭಾಷೆಯಲ್ಲಿರುವ ಉತ್ತಮ ಗ್ರಂಥಗಳನ್ನು ತನ್ನ ಸ್ವಂತ ಗ್ರಂಥ ಭಂಡಾರದಲ್ಲಿ ಸಂಗ್ರಹಿಸಿಟ್ಟುಕೊಂಡಿರುವ ವಿದ್ಯಾವಂತ ಪ್ರಜೆ ತನ್ನ ಸಂಸ್ಕೃತಿಯ ಮಟ್ಟವನ್ನು ಪ್ರದರ್ಶಿಸುತ್ತಾನೆ. ಪುಸ್ತಕ ಕೀಟ(Book worm)ವಾಗಿರುವ ಮನುಷ್ಯ ತನ್ನ ವ್ಯವಹಾರಗಳಲ್ಲಿ ಅಷ್ಟಾಗಿ ಜಾಣನಾಗಿರುವುದಿಲ್ಲ ಎಂಬ ಒಂದು ಸಾಮಾನ್ಯ ಆರೋಪವಿದೆ. ಆದರೆ ಈ ಆರೋಪದಲ್ಲಿ ಸತ್ಯಾಂಶವಿಲ್ಲ. ಹೀಗೆ ಹೇಳುವುದು ಕೇವಲ ಭ್ರಮೆ! ಪುಸ್ತಕ ಓದುವ ಉತ್ತಮ ಹವ್ಯಾಸ ಬೆಳೆಸಿಕೊಂಡಿರುವ ಸಾವಿರಾರು ವಿದ್ಯಾವಂತರು ತಮ್ಮ ತಮ್ಮ ಉದ್ಯೋಗಕ್ಷೇತ್ರಗಳಲ್ಲೂ, ಖಾಸಗಿ ವ್ಯವಹಾರಗಳಲ್ಲೂ ಶೇಕಡ ನೂರರಷ್ಟು ಯಶಸ್ವಿಯಾಗಿರುವುದು ಅನುಭವವೇದ್ಯವಾದ ಸಂಗತಿಯಾಗಿದೆ.

ಗ್ರಂಥವ್ಯಾಸಂಗ ನಮ್ಮ ದೈನಂದಿನ ಬದುಕಿನ ಅವಿಭಾಜ್ಯ ಅಂಗವಾಗಿ ಬೆಳೆದು ಬಂದಾಗ ಮಾತ್ರ ನಮ್ಮ ಬದುಕಿಗೆ ಒಂದು ಸಮಗ್ರತೆ ಮತ್ತು ಸಾರ್ಥಕತೆಗಳು ಬರುತ್ತವೆ. ನಮ್ಮ ವ್ಯವಹಾರಜ್ಞಾನ ಮತ್ತು ಸಂಸ್ಕೃತಿಯ ಮಟ್ಟ ಹೆಚ್ಚುತ್ತದೆ. ನಮ್ಮ ಜ್ಞಾನಭಂಡಾರವನ್ನು ಸಮೃದ್ಧಿಗೊಳಿಸಲು ಉತ್ತಮ ಗ್ರಂಥಗಳನ್ನು ವ್ಯಾಸಂಗ ಮಾಡುವುದಕ್ಕಿಂತ ಬೇರೆ ಉತ್ತಮ ದಾರಿಯಿಲ್ಲ.

ಉತ್ತಮ ಗ್ರಂಥವೊಂದು ಸದಾ ನಮ್ಮ ಜೇಬಿನಲ್ಲಿದ್ದರೆ ನಮ್ಮ ಜತೆಯಲ್ಲಿ ಒಬ್ಬ ಆತ್ಮೀಯ ಸ್ನೇಹಿತನಿರುವಷ್ಟು ಸಂತೋಷ ಮತ್ತು ಸಮಾಧಾನಗಳು ಲಭಿಸುತ್ತದೆ. ಉತ್ತಮ ಗ್ರಂಥ ಆತ್ಮೀಯ ಮಿತ್ರನಾಗಿ, ಒಬ್ಬ ಹಿತೈಷಿಯಾಗಿ, ಮತ್ತು ಮಾರ್ಗದರ್ಶಿಯಾಗಿ ನಮಗೆ ನೆರವು ನೀಡಬಲ್ಲದು. ನಮ್ಮ ಬದುಕಿನಲ್ಲಿ ಆಗಾಗ್ಗೆ ಅನಿವಾರ್ಯವಾಗಿ ತಲೆಹಾಕುವಂಥ ಬೇಸರ, ನಿರಾಶೆ, ಕಳವಳ, ಚಿಂತೆ ಮತ್ತು ಏಕಾಕಿತನವನ್ನು ನಿವಾರಿಸಬಲ್ಲದು. ಹೀಗೆ ನಮ್ಮ ಬಾಳಿಗೆ ಅನೇಕ ವಿಧಗಳಲ್ಲಿ ನೆರವಾಗುವಂಥ, ಬಾಳಿಗೆ ಬೆಳಕಾಗುವಂಥ ಉತ್ತಮ ಗ್ರಂಥಗಳನ್ನು ಓದುವಂಥ ಹವ್ಯಾಸವನ್ನು ನಾವು ನಮ್ಮ ವಿದ್ಯಾರ್ಥಿ ದೆಸೆಯಿಂದಲೇ ಬೆಳೆಸಿಕೊಂಡು ಹೋಗುವುದು ಸರ್ವೋತ್ಕೃಷ್ಟ ಮಾರ್ಗ.

ನಮ್ಮ ಬಾಲ್ಯದಿಂದಲೂ ಇಂತಹ ಹವ್ಯಾಸ ನಮ್ಮ ಜತೆಯಲ್ಲೇ ಬೆಳೆದು ಬದರೆ ನಮ್ಮ ಇಡೀ ಜೀವಮಾನ ಪರ್ಯಂತವೂ ಪುಸ್ತಕ ಪ್ರೇಮಿಗಳಾಗಿರಲು



ಸಾಧ್ಯವಾಗುತ್ತದೆ. ನಮ್ಮ ಜ್ಞಾನಭಂಡಾರವನ್ನು ವಿಸ್ತರಿಸಿ ಸಂಪದ್ಭರಿತವನ್ನಾಗಿ ಮಾಡಲು ತುಂಬಾ ಸಹಾಯವಾಗುತ್ತದೆ.

ಈ ಸಂದರ್ಭದಲ್ಲಿ ಒಬ್ಬ ಕವಿ ಹೇಳಿರುವ ಮಾತು ಜ್ಞಾಪಕಕ್ಕೆ ಬರುತ್ತದೆ. 'ಹೊತ್ತು ಹೋಗುವುದೆನಗೆ ಸತ್ತವರ ಸಂಗದಲಿ' ಎಂದು ಆ ಕವಿ ಹೇಳುತ್ತಾನೆ. ಇಲ್ಲಿ ಕವಿಯ ವಾಣಿ ಧ್ವನಿಪೂರ್ಣವಾಗಿದೆ. ಅದನ್ನು ಉದ್ದೇಶಪೂರ್ವಕವಾಗಿ ಉಪಯೋಗಿಸಿರುವ 'ಸತ್ತವರ ಸಂಗದಲಿ' ಎಂಬ ಮಾತು ಸಾಂಕೇತಿಕವಾಗಿ ಉತ್ತಮ ಗ್ರಂಥಗಳನ್ನು ಸೂಚಿಸುತ್ತದೆ.

ಉತ್ತಮ ಗ್ರಂಥಗಳು ನಮ್ಮ ಬಾಳಿನಲ್ಲಿ ಯಾವಾಗಲೂ ದಾರಿದೀವಿಗೆಯಾಗಬಲ್ಲವು. ನಮ್ಮ ಬದುಕಿಗೆ ಬೆಳಕನ್ನೂ, ಸಾಂತ್ವನವನ್ನೂ, ನೆಮ್ಮದಿಯನ್ನೂ ದೊರಕಿಸಿಕೊಡಬಲ್ಲವು. ನಮ್ಮ ಅನುಭವ ಪ್ರಪಂಚವನ್ನು ವಿಸ್ತಾರಗೊಳಿಸಬಲ್ಲವು. ನಮ್ಮ ವ್ಯವಹಾರ ಜ್ಞಾನ ಮತ್ತು ಕೌಶಲ್ಯವನ್ನು ಹೆಚ್ಚಿಸಬಲ್ಲವು.

ಉತ್ತಮ ಗ್ರಂಥಗಳನ್ನು ಓದುವ ಒಳ್ಳೆಯ ಹವ್ಯಾಸ ಪ್ರಪಂಚದ ಸರ್ವೋತ್ಕೃಷ್ಟ ವ್ಯವಹಾರ ಜ್ಞಾನಸಂಪತ್ತನ್ನು ಬೆಳೆಸಿಕೊಳ್ಳಲು ನಮಗಿರುವ ಪ್ರಮುಖಸಾಧನ, ನಮ್ಮ ಬಾಳಿಗೆ ಜ್ಞಾನದ ಬೆಳಕನ್ನು ನೀಡುವ ಏಕೈಕ ಸಾಧನ. ಓದುಗಾರಿಕೆಯಿಂದ ನಮ್ಮ ಸುಖ ಸಂತೋಷಗಳು ಹೆಚ್ಚುತ್ತವೆ. ನಮ್ಮ ಜ್ಞಾನದ ದಿಗಂತ ವಿಸ್ತರಿಸುತ್ತದೆ. ಸಮಾಜದಲ್ಲಿ ನಮಗಿರುವ ಅರ್ಹತೆ, ಯೋಗ್ಯತೆ ಮತ್ತು ಗೌರವ ಪ್ರತಿಷ್ಠೆಗಳು ಹೆಚ್ಚುತ್ತವೆ.

ಯಾವುದಾದರೊಂದು ದೊಡ್ಡ ಗ್ರಂಥಾಲಯಕ್ಕೆ ಹೋಗಿ ಅಲ್ಲಿ ವಿಶಾಲವಾದ ಕೋಣೆಗಳಲ್ಲಿರುವ ಬೀರುಗಳಲ್ಲಿ ಹರಡಿರುವ ಪುಸ್ತಕಗಳ ರಾಶಿಗಳನ್ನು ನೋಡಿದಾಗ ಪ್ರಪಂಚದಲ್ಲಿರುವ ಜ್ಞಾನಭಂಡಾರ ಸಪ್ತಸಾಗರಗಳಷ್ಟು ವಿಸ್ತಾರವಾಗಿದೆಯೆಂಬ ಪರಿಜ್ಞಾನ ನಮ್ಮಲ್ಲಿ ಮೂಡುತ್ತದೆ. ಜೊತೆಯಲ್ಲೇ ನಾವು ಗಳಿಸಿರುವ ಅಲ್ಪಜ್ಞಾನದ ಅರಿವುಂಟಾಗಿ ಮನಸ್ಸಿಗೆ ತುಂಬಾ ಸಂಕಟವಾಗುತ್ತದೆ, ಮುಜಗರವಾಗುತ್ತದೆ. ಯಾರೇ ಆಗಲಿ ಯಾವ ಭಾಷೆಯಲ್ಲಾಗಲೀ ಪ್ರಕಟವಾಗಿರುವ, ಆಗುತ್ತಿರುವ ಎಲ್ಲ ಪುಸ್ತಕಗಳನ್ನು ಆಮೂಲಾಗ್ರವಾಗಿ ಓದಿ ಮುಗಿಸಲು ಸಾಧ್ಯವಿಲ್ಲ. ಪ್ರತಿಯೊಬ್ಬರೂ ತಮಗೆ ಆಸಕ್ತಿ ಇರುವ ವಿಷಯಕ್ಕೆ ಸಂಬಂಧಿಸಿದ ಪುಸ್ತಕಗಳನ್ನು ಓದುವುದು ಸರ್ವೋತ್ಕೃಷ್ಟಮಾರ್ಗ. ಅಂತಹ ವಿಷಯಗಳಲ್ಲೂ ಪ್ರಕಟವಾಗುವ ಎಲ್ಲ ಪುಸ್ತಗಳನ್ನು ಓದುವುದು ಸಾಧ್ಯವಿಲ್ಲ. ಅದಕ್ಕೆ ನಮ್ಮ ಇಡೀ ಜೀವಮಾನವಾದರೂ ಸಾಲದು ಪ್ರಪಂಚದಲ್ಲಿ ಪ್ರತಿಯೊಂದು ವಿಷಯಕ್ಕೆ ಸಂಬಂಧಿಸಿದ ಜ್ಞಾನಭಂಡಾ ತುಂಬಾ ವಿಸ್ತೀರ್ಣವಾಗಿ, ವೈವಿಧ್ಯಪೂರ್ಣವಾಗಿ ಬೆಳೆದುಬಿಟ್ಟಿದೆ. ಇನ್ನು ಬೃಹದಾ

ಕಾರವಾಗಿ ಬೆಳೆಯುತ್ತಲೇ ಇದೆ. ಜ್ಞಾನಭಂಡಾರವನ್ನು ಒಂದು ಮಹಾಸಾಗರಕ್ಕೆ ಹೋಲಿಸಬಹುದು. ಸಾಗರದ ಆಳಕ್ಕೆ ಹೋಗಿ ಅಲ್ಲಿ ಅಡಗಿರುವ ಅಮೂಲ್ಯವಾದ ಮುತ್ತುರತ್ನಗಳನ್ನು ಹುಡುಕಿ ತರುವಂತೆಯೇ ನಾವೂ ಕೂಡಾ ಜ್ಞಾನಸಾಗರಕ್ಕೆ ಇಳಿದು ತಿಳಿವಳಿಕೆ, ವಿವೇಚನೆ ಮತ್ತು ಲೋಕಾನುಭವ ಎಂಬ ಅಮೂಲ್ಯ ಮುತ್ತುರತ್ನಗಳನ್ನು ಹುಡುಕಿ ತರಬೇಕಾಗಿದೆ. ಇದರಿಂದ ನಮ್ಮ ಬದುಕು ಶ್ರೀಮಂತವಾಗುತ್ತದೆ. ನಮ್ಮ ಮಾನಸಿಕ ಮತ್ತು ಬೌದ್ಧಿಕ ಶಕ್ತಿಸಾಮರ್ಥ್ಯಗಳು ವಿಸ್ತರಿಸುತ್ತಾ ಹೋಗುತ್ತವೆ.

ಯಾವ ಪುಸ್ತಕವನ್ನೇ ಆಗಲಿ ಮೊದಲಿಂದ ಕಡೆಯ ಪುಟದವರೆಗೂ ಓದಲೇಬೇಕೆಂಬ ನಿಯಮವೇನೂ ಇಲ್ಲ. ಕೆಲವು ಪುಸ್ತಕಗಳು ರುಚಿನೋಡಲು ಮಾತ್ರ ಅರ್ಹವಾಗಿರುತ್ತವೆ. ಇನ್ನು ಕೆಲವು ಪುಸ್ತಕಗಳನ್ನು ನಾವು ಪೂರ್ತಿ ಕಬಳಿಸಲು ಯೋಗ್ಯವಾಗಿರುತ್ತವೆ. ಕೆಲವು ಪುಸ್ತಕಗಳನ್ನು ಮಾತ್ರ ಅಗಿದು ಜೀರ್ಣಿಸಿಕೊಳ್ಳಬೇಕಾಗುತ್ತದೆ. ಎಂದರೆ ಕೆಲವು ಪುಸ್ತಕಗಳು ಭಾಗಶಃ ಓದಬೇಕಾದವು. ಕೆಲವು ಮಾತ್ರ ಪೂರ್ತಿಯಾಗಿ ಓದಬೇಕಾದವು ಎಂದು ಪ್ರಸಿದ್ಧ ತತ್ತ್ವಜ್ಞಾನಿ ಮತ್ತು ಸಾಹಿತಿ ಬೇಕನ್ ಮಹಾಶಯನು ಹೇಳಿದ್ದಾನೆ. ನಿಜವಾಗಿಯೂ ಓದುವ ರಹಸ್ಯ ಅಡಗಿರುವುದು ಈ ಮಾತಿನಲ್ಲಿಯೇ; ಗ್ರಂಥವ್ಯಾಸಂಗದಿಂದ ಮನುಷ್ಯನ ಬಾಳಿಗೆ ಪರಿಪೂರ್ಣತೆ ಲಭಿಸುತ್ತದೆ ಎಂದು ಇದೇ ಬೇಕನ್ ಮಹಾಶಯ ಹೇಳಿದ್ದಾನೆ.

ಕೋಲ್‌ರಿಜ್ ಎಂಬ ಇಂಗ್ಲೀಷ್ ಕವಿ ಓದುಗರನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿದ್ದಾನೆ. ಕೆಲವರಿಗೆ ಓದುಗಾರಿಕೆ ಕೇವಲ ಓದಿಗಾಗಿ ಮಾತ್ರ. ಇವರು ಹೊತ್ತು ಕಳೆಯಲು ಮಾತ್ರ ಓದುತ್ತಾರೆ. ಓದಿದ್ದು ಅವರ ತಲೆಬುರುಡೆಯಲ್ಲಿ ಲವಲೇಶವಾದರೂ ಉಳಿಯುವುದಿಲ್ಲ. ಇನ್ನು ಕೆಲವು ಓದುಗರು ಪರೀಕ್ಷೆಗಳಲ್ಲಿ ತೇರ್ಗಡೆಯಾಗಲು ತಮ್ಮ ಪಠ್ಯಪುಸ್ತಕಗಳ ಕೀಟಗಳಾಗುತ್ತಾರೆ. ಉತ್ತರ ಪತ್ರಿಕೆಗಳ ಮೇಲೆ ತಮಗಿರುವ ಕಲಬೆರಿಕೆಯ ಜ್ಞಾನವನ್ನು ವಾಂತಿ ಮಾಡುವುದಕ್ಕಾಗಿಯೇ ಇಂಥವರು ಓದುತ್ತಾರೆ.

ಮೂರನೆಯ ರೀತಿಯ ಓದುಗರು ಸೋಸುಕಗಳಂತೆ ಇರುತ್ತಾರೆ. ಇವರ ಓದುಗಾರಿಕೆ ಗಾಣಕ್ಕೆ ಸಿಕ್ಕಿದ ಕಬ್ಬಿನ ಹಾಗೆ. ಕಬ್ಬಿನ ಹಾಲೆಲ್ಲಾ ವ್ಯರ್ಥವಾಗ ಸೋರಿಹೋಗುತ್ತದೆ. ಬರೀ ಸಿಪ್ಪೆ ಅಥವಾ ಸೊಂಡು ಮಾತ್ರ ಉಳಿಯುತ್ತದೆ. ಒಳ್ಳೆಯ ಅಥವಾ ಕೆಟ್ಟ ಪುಸ್ತಕಗಳನ್ನೆಲ್ಲಾ ಯಾವ ತಾರತಮ್ಯ ಪರಿಜ್ಞಾನವೂ ಇಲ್ಲದೆ ಇವರು ಓದಿಮುಗಿಸುತ್ತಾರೆ. ನಾಲ್ಕನೆಯ ವರ್ಗದ ಓದುಗರೇ ನಿಜವಾದ ಓದುಗರು.

ಕವಿಯೇ ಹೇಳುವ ಹಾಗೆ ಪ್ರತ್ಯುತ್ಪನ್ನ ಮತಿಗಳು, ಪ್ರಜ್ವಲಿಸುವ ವಜ್ರಗಳು, ನಿಜವಾದ ಓದುಗಾರಿಕೆ ಮನುಷ್ಯನನ್ನು ವಜ್ರವನ್ನಾಗಿಸುತ್ತದೆ. ಬೆಳಕು ಅಲ್ಲಿ ಪ್ರತಿಫಲಿಸುತ್ತದೆ.



# ಶಿಲಾ ಮೂರ್ತಿ

ಶಿಲಾ ಮೂರ್ತಿ

[ ಸಣ್ಣ ಕಥೆ

—ಎನ್. ಎಸ್. ಗದಗಕರ

ಎತ್ತಿನ ಗಾಡಿ ಮಂದಗತಿಯಲ್ಲಿ ಸಾಗಿತ್ತು. ಒಳಗೆ ಕುಳಿತ ಇಪ್ಪತ್ತೈದು ವರ್ಷದ ತರುಣ ಚಕ್ಕಡಿಯವನಿಗೆ ಸಲಹೆ ಕೊಡುತ್ತಿದ್ದ. ಆ ಗಾಡಿವಾಲಾ ಕನಸಿನ ಲೋಕದಲ್ಲಿ ವಿಹರಿಸುತ್ತಿರುವಂತೆ ಭಾಸವಾಗುತ್ತಿತು. ಚಕ್ಕಡಿ ನಡೆಸುವಲ್ಲಿ ಅಂತಹ ವಿಶೇಷ ಆಸಕ್ತಿ ಕಾಣುತ್ತಿರಲಿಲ್ಲ. ತರುಣನೂ ಕೂಡ ಅಷ್ಟೆ ನಿರ್ಲಕ್ಷ ಭಾವದವನಾಗಿದ್ದ. ವೇಗ ಹೆಚ್ಚಿಸೆಂದು ಅವನೇನು ಸೂಚಿಸಲಿಲ್ಲ. ಇಬ್ಬರಿಗೂ ತಮ್ಮ ತಮ್ಮ ವೈಯಕ್ತಿಕ ವಿಚಾರ ತಂದ್ರಿ. ಆಗೀಗ ತರುಣ ನಿಟ್ಟುಸಿರು ಬಿಡುತ್ತಿದ್ದ. ಯಾವುದೊ ಚಿಂತೆ ಅವನನ್ನು ಗಾಸಿ ಮಾಡಿದಂತೆ ಎನಿಸುತ್ತಿತ್ತು. ಈರ್ವರಲ್ಲಿ ಯಾವ ಮಾತುಕತೆಯೂ ನಡೆಯುತ್ತಿರಲಿಲ್ಲ. ಇನ್ನು ಸ್ವಲ್ಪ ಹೊತ್ತಿನಲ್ಲಿ ಮನೆ ಮುಟ್ಟುತ್ತಿದ ತರುಣ. ಎಲ್ಲ ಜುಕ್ಕು ಜುಲುಮೆಯ ಕರ್ತವ್ಯ !

ಪಾರ್ವತಿಯು ತನ್ನ ಗಲ್ಲದಗುಂಟ ಇಳಿಯುವ ಕಣ್ಣೀರನ್ನು ಒರಿಸಿಕೊಂಡಳು. ಮನಸಿನ ಸಮಾಧಾನಕ್ಕೆಂದು ಮಗು ಹೇಮಾಳನ್ನು ಆಲಂಗಿಸಿದಳು. ಆಕೆಗೆ ತಿಳಿಹೇಳಿದಳು. “ಹೇಮಾ, ನಾವಿಂದು ಈ ಮನೆ ಬಿಟ್ಟು ಹೊರಡಬೇಕಾಗಿದೆ. ನಿಮ್ಮ ಅಣ್ಣ ಬಂದನೇನು ನೋಡಿಕೊಂಡು ಬಾ” ಹೇಮಾ ಕಟ್ಟೆಯ ತುದಿಗೆ ನಿಂತು ನೋಟ ಹರಿಯುವವರೆಗೆ ನಿರೀಕ್ಷಿಸಿದಳು. ಪಾರ್ವತಿಯ ಮನಸ್ಸು ಹಿಂದಿನ ನೆನಪುಗಳನ್ನು ಮೆಲುಕಾಡಿಸತೊಡಗಿತು. ಆಗ ಆಕೆಗೆ ಹದಿನೆಂಟರ ಪ್ರಾಯ. ಅಷ್ಟೇನು ಲಾವಣ್ಯವತಿಯಾಗಿರದಿದ್ದರೂ ಕುರುಪಿ ಎಂದು ಹೇಳಲು ಬಾರದು. ಆಧುನಿಕ ಶಿಕ್ಷಣ ಪಡೆದವಳು, ರಸಿಕಳು' ಜಗತ್ತಿನ ಪರಿಜ್ಞಾನ ಸಾಧಿಸಿದ್ದಳು. ಅಂತೆ ಆಕೆಯ ತಂದೆ ಮದುವೆಯ ಪ್ರಸ್ತಾಪ ಎತ್ತಿದಾಗ ಪಾರ್ವತಿ ಆತುರಳಾಗಲಿಲ್ಲ. ವಿರಾಗಿಣಿಯ ಸೋಗೂ ಹಾಕಲಿಲ್ಲ. !

ಅಂದು ಆಕೆಯ ವಿವಾಹದ ದಿನ. ವರನಾದ ಶಶಿಧರನು ಅಚ್ಚುಕಟ್ಟಾದ ದಕ್ಷಿಣಾದಿ ಉಡುಪಿನಲ್ಲಿದ್ದ. ನೋಡಲು ಸಾದಾ ಕಾಣುತ್ತಿದ್ದರೂ ಒಳ್ಳೆ ಅಭಿರುಚಿಗಳುಳ್ಳವನೆಂದು ಥಟ್ಟನೆ ಹೊಳೆಯುವಂತಿತ್ತು. ಸಂಗೀತವೇ ಉಸಿರೆಂದು ಭಾವಿ

ಸಿದ ವ್ಯಕ್ತಿ ಹೀಗೆ ಇದ್ದುದು ಅಸಹಜವೇನಲ್ಲ !

ಅಹುದು ಶಶೀಧರನು ಮೇಲ್ಮಟ್ಟದ, ಸಂಗೀತಗಾರನೆಂದು ಹೆಸರುವಾಸಿಯಾಗಿದ್ದ. ಅವನು ಈಗ ನುಡಿಸುವ ಸರಣಿ ತರುಣ ಸಂಗೀತ ಪೀಳಿಗೆಯಲ್ಲಿ ಅಸೂಯೆ ಹೆಚ್ಚಿಸುವಂತಿತ್ತು. ಹಳೆ ಹೊಸ ಸಂಗೀತ ಶ್ರೇಣಿಗಳ ಮಧುರ ಸಂಗಮ ಎನಿಸಿದವ. ದಕ್ಷಿಣಾದಿ ಹಾಗೂ ಹಿಂದುಸ್ತಾನಿ ಎರಡೂ ರೀತಿಗಳು ಅವನಿಗೆ ಕರತಲಾಮಲಕವಾಗಿದ್ದವು. ಮೇಲೆ ಕೋಕಿಲ ಕಂದ ! ಪಾರ್ವತಿಯ ತಂದೆ ರಾಮಮನೋಹರರದು ಮೊಟ್ಟಮೊದಲಿನ ಸಂಗೀತ. ಸಭೆಯಲ್ಲಿ ಶಶಿಧರನ ವಿದ್ಯೆಗೆ ಮಾರುಹೋದರು. ಅವನನ್ನು ಬಾಯಿ ತುಂಬ ಹೊಗಳಿದರು ಸಂದರ್ಶನ ಸಮಯದಲ್ಲಿ. ತಮ್ಮ ಕಲಿತ ರಸಿಕ ಮಗಳಿಗೆ ಇವನೇ ತಕ್ಕ ವರನೆಂದು ಮನದಲ್ಲಿ ಸಂಕಲ್ಪಿಸಿದರು.

ಪ್ರಾಸ್ತಾವಿಕ ಮಾತುಕತೆಗಳು ಮುಗಿದು ರಾಮ ಮನೋಹರನು ಮಗಳ ಒಪ್ಪಿಗೆಯನ್ನು ಪಡೆದು ಲಗ್ನದ ವಿಷಯದಲ್ಲಿ. ಒಂದು ಶುಭ ಮುಹೂರ್ತದಲ್ಲಿ ಶಶಿಧರ, ಪಾರ್ವತಿ ಗಂಡ ಹೆಂಡಿರಾದರು. ದಂಪತಿಗಳು ಭಾವೀ ಜೀವನದ ಸ್ವರ್ಣ ಸ್ವಪ್ನಗಳನ್ನು ಹೆಣೆದರು; ನಿಜಕ್ಕೂ ಪ್ರಾರಂಭದ ಕೆಲದಿನ ಅವರು ರೋಮಾಂಚಕ ಪ್ರಪಂಚದ ವೈಮರೆತರು. ಆದರೆ ಇದೆ ಸುಖ ಚಿರಸ್ಥಾಯಿಯಾದರೆ ?

ಪಾರ್ವತಿ ಕಣ್ಣೀರು ಒರಿಸಿಕೊಂಡು ಹೇಮಾಳನ್ನು ಹುಡುಕಲು ಬಾಗಿಲಿಗೆ ಹೋದಳು. ಎತ್ತಿನ ಗಾಡಿ, ಆಕೆ ಇಬ್ಬರೂ ಕಾಣಲಿಲ್ಲ. ಆದರೆ ದೂರಿನಿಂದ ಗೆಜ್ಜೆಗಳ ಘಿಲ್ ಘಿಲ್‌ನಿನಾದ ಮಾತ್ರ ಕೇಳಿಬರುತ್ತಿತ್ತು. ಮತ್ತೆ ಆಕೆಯೆದುರು ಜೀವನ ಸ್ಮೃತಿಗಳು ಝುಗ್ಗೆಂದು ತೂರಿಬಂದವು. ಕೆಲಕಾಲ ಆಕೆಗೆ ತನ್ನ ಗಾಡಿನಲ್ಲಿ ಏನೊ ಸ್ಥಿತ್ಯಂತರ ಉಂಟಾದಂತೆ ಎನಿಸತೊಡಗಿತು.

ಮದುವೆಯ ಮೊದ ಮೊದಲು ಶಶಿಧರ ಪಾರ್ವತಿಯನ್ನು ಸಂಗೀತ ಸಭೆಗ ಕರೆದೊಯ್ಯುತ್ತಿದ್ದ. ಆಕೆಯನ್ನು ಮುಂದಿನ ಸಾಲಿನಲ್ಲಿಯೇ ಕುಳ್ಳಿರಿಸುತ್ತಿದ್ದ. ಒಮ್ಮಮ್ಮೆಯಂತೂ ಆಕೆ ಎದುರಿಗಿದ್ದರೆ ಸ್ಫೂರ್ತಿ ಹೊರಹೊಮ್ಮುತ್ತಿತ್ತು. ಮರಳಿ ಬರುವಾಗ ಅವ ದಾರಿಯಲ್ಲಿ ಆಕೆಗೆ ಹೇಳುತ್ತಿದ್ದ.- 'ಪಾರೂ ನನ್ನ ಇಂದಿನ ಕಾರ್ಯಕ್ರಮ ನಿನಗೆ ಹೇಗೆ ಅನಿಸಿತು ? ನಿನ್ನ ಸ್ವಚ್ಛ ಅಭಿಪ್ರಾಯ ಅರುಹು'

'ನನ್ನ ಖಚಿತ ಅಭಿಪ್ರಾಯ ಹೇಳಿದರೆ ನೀವು ಕೋಪಿಸಿಕೊಳ್ಳುವದಿಲ್ಲವಷ್ಟೆ ! 'ಕಲ್ಯಾಣಿ' ಎನ್ನುವಾಗ ನನಗೆ ಒಳ್ಳೆ ಒಪ್ಪಿಗೆ ಆಯಿತು. ಆದರೆ 'ಬಾಗೇಶ್ವರ' ಮಾತ್ರ ಅಷ್ಟಕ್ಕಷ್ಟೆ ಎನಿಸಿತು.

'ಸರಿ, ಸರಿ, ನೀನೂ ಒಳ್ಳೆ ವಿಮರ್ಶಳು. ನಾನು ಹಿಂದುಸ್ತಾನಿ ಪರಂಪರೆಗೆ



ಅತಿಯಾಗಿ ಕಟ್ಟು ಬಿದ್ದುದರಿಂದ ಹಾಗಾಗಿರಬಹುದು.

ಇಂತಹ ಹಲವಾರು ಚರ್ಚೆಗಳು ಅವರ ಜೀವನಲ್ಲಿ ಹೊಂಬೆಳಕು ಚೆಲ್ಲಿದವು. ಕೆಲದಿನ ಆ ಹೌಸು ಕಡಿಮೆ ಆಯಿತು. ಒಮ್ಮೊಮ್ಮೆ ಪಾರ್ವತಿ ಮಾತಾಡಿಹೋದರೆ ಶಶಿಧರ ಮೌನಿ ಆಗಿರುತ್ತಿದ್ದ. ಆಕೆಯನ್ನು ತಪ್ಪಿಸಬೇಕೆಂಬ ಹವಣಿಕೆ ಕಾಣಬರುತ್ತಿತ್ತು. ಹೀಗಾಗಲು ಕಾರಣವೇನು ? ಇತ್ತೀಚೆಗೆ ತನ್ನ ಪತಿ ಕುಡಿಯುವ ಚಟಕ್ಕೆ ಬಿದ್ದಿರುವನೆಂದು ಆಕೆಗೆ ಕರ್ಣೋಪಕರ್ಣವಾಗಿ ತಿಳಿಯಿತು. ಕುಣಿತ ಇಸ್ಪೀಟು ಆಟ ನಡೆಯುವಲ್ಲಿ ಹೋಗುವನೆಂದು ಹೇಳುತ್ತಿದ್ದರು. ಹಲವು ಸಲ ಆಕೆಗೆ ಅವನ ಕುಡಿತದ ಸುಳುವು ಹತ್ತಿತು. ತನ್ನ ಹಾಗೂ ಗೋಪುವಿನ ಗತಿ ಏನು ? ಎಂದಾಕೆ ಯೋಚಿಸುತ್ತಿದ್ದಳು. ಹಿಗಿರುವಾಗ ಶಶಿಧರ 'ವ್ಯರ್ಥ ಏಕೆ ಕೊರಗುತ್ತಿ?' ಎಂದು ನುಡಿದು ಸಾಂತ್ವನಗೆಯುತ್ತಿದ್ದ.

ಹೀಗೆ ಆದಾಗ ಆಕೆಯ ಮನಸ್ಸು ಗಾಳಿಗಿಂತ ಹಗುರಾಗುತ್ತಿತ್ತು, ಆದರೂ ಕೇವಲ ಸಾಂತ್ವನದಿಂದ ಕೌಟುಂಬಿಕ ನೆಮ್ಮದಿ ಹೇಗೆ ನೆಲೆಸೀತು? ಶಶಿಧರನ ದುಶ್ಚಟಗಳು ಕ್ರಮೇಣ ಬೆಳಕಿಗೆ ಬರತೊಡಗಿದವು. ಅನೇಕ ಸಲ ಅವ ರಾತ್ರಿಗೆ ಅವ ಮನೆಗೆ ಬರತೊಡಗಿದ. ಒಳಗೆ ಬಂದೊಡನೆ ಹೆಂಡತಿಯೊಡನೆ ಏನೂ ತುಟಿ ಬಿಚ್ಚದೆ ಹಾಗೇ ಮಲಗುತ್ತಿದ್ದ. ಆತ ದುಶ್ಚಟಗಳಿಗೆ ಒಳಗಾಗಿರುವನೆಂಬ ಸಂದೇಹ ಪಾರ್ವತಿಗೆ ದೃಢವಾಯಿತು. ಇಂತಹ ಮಾನಸಿಕ ವಿವೇಚನೆ ಹೆಚ್ಚಿದಾಗ ಆಕೆಗೆ ಮಗು ಗೋಪಿಯೇ ಪ್ರೀತ್ಯಾಸ್ಪದ ಎನಿಸುತಿದ್ದ. ಆಗ ಆಕೆ ಉದ್ಗಾರ ತೆಗೆಯುತ್ತಿದ್ದಳು—'ಗೋಪು, ನಾನೆಂಥ ಸವಿಗನಸು ಕಂಡಿದ್ದೆ ! ಆದರೆ ಈಗ ನಡೆದುದೇನು ? ಮರುಕ್ಷಣ ಪಾರ್ವತಿಗೆ ಕಣ್ಣೀರು ತುಂಬ ಕೋಡಿ ಕೊಚ್ಚಿ ಹರಿಯುತ್ತಿದ್ದವು.

ಮಾನವನ ಸುಖವಾಗಲಿ ದುಃಖವಾಗಲಿ ಕಾಲಗತಿಯಲ್ಲಿ ಉತ್‌ಶೃಂಖಲವಾಗಿರುವವು. ಪ್ರಪಂಚ ಎಂಬುದೊಂದು ಯಂತ್ರ. ಆಗೀಗ ರಸ ನಿಮಿಷಗಳೂ ಅಲ್ಲಿ ಇರುವವು. ಪಾರ್ವತಿ ಈಗ ಹೇಮಾಳಿಗೆ ಜನ್ಮವಿತ್ತಳು. ಹೇಮಾ ಹುಟ್ಟಿ, ತನ್ನ ಚಿಂತೆ ದೂರ ದೂರ ತಳಕಿತ್ತು ಓಡೀತೆಂದು ಹಾರೈಸಿದ್ದಳು ಪಾರ್ವತಿ. ಆದರೆ ಅಯ್ಯೋ ! ಪರಿಸ್ಥಿತಿ ಇನ್ನೂ ಹದಗೆಟ್ಟಿತು. ಈವರೆಗೆ ಕೇವಲ ಕುಡಿದು ಬರುತ್ತಿದ್ದವ ಈಗ ತನ್ನ ಮನೆಯನ್ನು ಉಡಾಳ ಗೆಳೆಯರ ಗ್ಯಾಂಗನ್ನಾಗಿ ಪರಿವರ್ತಿಸಿದೆ. ಮನೆಯಲ್ಲೇ ಸಂಗೀತ, ನೃತ್ಯ, ಕುಡಿತ, ಇಸ್ಪೀಟು ಆಟ ನಿರಂತರ ನಡೆಯತೊಡಗಿದವು.

ಇಂತಹ ವಿಪತ್ತು ಅಡಿ ಇಟ್ಟರೂ ಪಾರ್ವತಿ ತನ್ನ ಮಕ್ಕಳನ್ನು ತಂದೆಯ

ಬಳಿಗೆ ಮೇಲಂತಸ್ತಿಗೆ ಕಳಿಸುತ್ತಿರಲಿಲ್ಲ. ತಂದೆಯ ದುಶ್ಚಟಗಳ ಅರಿವು ಅವರಿಗೆ ಆಗಬಾರದೆಂದು ಆಕೆಯ ಇಚ್ಛೆ. ಆಗೀಗ ಶಶಿಧರ ಪಾರ್ವತಿಯನ್ನು ಅವಮಾನಿಸುತ್ತಿದ್ದ, ಬಡಿಯುತ್ತಿದ್ದ. ಅವನ ಆರೋಗ್ಯ ನಶಿಸಿದಂತೆ ಈಕೆಯದೂ ಇಳಿತಕ್ಕೆ ಬಿದ್ದಿತು.

ಶಶಿಧರನು ಸಂಗೀತ ಕಚೇರಿ ನಡೆಸುತ್ತಿರುವಾಗ ಕೆಲವು ಸಲ ಒಮ್ಮೆಲೆ ಧ್ವನಿ ಕುಗ್ಗುತ್ತಿತ್ತು. ಮುಂದೆ ಕಾರ್ಯಕ್ರಮ ವ್ಯವಸ್ಥಿತವಾಗಿ ಸಾಗುತ್ತಿರಲಿಲ್ಲ. ರಸಿಕ ವರ್ಗ ಅವನ ಹಿಂದಿನ ರಸಮಯ ಹಾಡುಗಾರಿಕೆಯನ್ನು ನೆನಿಸಿಕೊಂಡು ಸಾಂತ್ವನಗೊಳ್ಳುತ್ತಿತ್ತು. ತತ್ಪರಿಣಾಮವಾಗಿ ಅವನ ಆದಾಯ ಕಡಿಮೆಯಾಯಿತು. ಮನೆಮನೆಗೆ ಹೋಗಿ ಸಂಗೀತ ಪಾಠ ಹೇಳಿಕೊಟ್ಟು ಉಪಜೀವನ ಸಾಗಿಸುವ ಪರಿಸ್ಥಿತಿ ಪ್ರಾಪ್ತವಾಯಿತು.

ಗೆಜ್ಜೆಯ ನಿನಾದ ಪಾರ್ವತಿಯನ್ನು ಎಚ್ಚರಿಸಿತು, ಆಕೆ ಹಣಿಕಿ ನೋಡಿದಳು. ಎದುರಿಗೇ ಎತ್ತಿನ ಗಾಡಿ! ಶಶಿಧರ ಒಳ ಕೊಠಡಿಯಲ್ಲಿ ವಿರಾಮಾಸನದಲ್ಲಿ ಕುಳಿತಿದ್ದ. ತನ್ನ ಪರಿಸ್ಥಿತಿಯನ್ನು ಹತೋಟಿಗೆ ತರಲು ಮನೆ ಬಿಟ್ಟು ಹೊರಡುವುದೇ ಮುಕ್ತ ಎಂದು ತಿಳಿದಳು. ಈಗ ಗೋಪಿ ದೊಡ್ಡವನಾಗಿ ಬಿ. ಕಾಂ. ಮುಗಿಸಿ ಬ್ಯಾಂಕಿನಲ್ಲಿ ಕಾರಕೂನನಾಗಿದ್ದ. ಆಗೀಗ ಅವನೇ ಆಕೆಯ ಚಿಂತೆಯನ್ನು ನಿವಾರಿಸುತ್ತಿದ್ದ. ಆದರೂ ಪತಿಯನ್ನು ಮರೆಯುವುದಾಗಲಿ, ಅವನಿಂದ ಅಗಲುವುದಾಗಲಿ ಜೀವದ ಸುತ್ತು ಎನಿಸುತ್ತಿತ್ತು.

ಅಂದು ಭಾನುವಾರ ಮುಂಜಾವು ಎಂಟು ಒಂಬತ್ತು ವರ್ಷದ ಹುಡುಗಿಯೊಬ್ಬಳು ಬಂದು, ಶಶಿಧರನಿಗೆ ಹೇಳಿದಳು. 'ರಾಧಾಮಣಿ ಅತ್ತಿಗೆ ರೂಪ ಥಿಯೇಟರಿಗೆ ಸಂಜೆ ಆರಕ್ಕೆ ಬರಲು ನಿಮಗೆ ಹೇಳಿರುವಳು'. ಆಕೆ ಇಷ್ಟು ಹೇಳುವದೇ ತಡ ಪಾರ್ವತಿ ಬಂದು ಪತಿಗೆ ಕೇಳಿದಳು—

'ಈ ರಾಧಾಮಣಿ ಯಾರು?'

ಪಾರ್ವತಿ ನೆಚ್ಚಿನಲ್ಲಿ ನುಡಿದಳು—'ಇಷ್ಟು ದಿನ ಕುಡಿತ, ಆಟ ಇದ್ದವು. ಪರ ಸ್ತ್ರೀ ಸಲಿಗೆಯೊಂದು ಈಗ ಆರಂಭವಾಯಿತೆ?'

'ಮುಚ್ಚು ಬಾಯಿ.' ಎಂದು ಅವ ನುಡಿಯುವಾಗ, ಗೋಪಿ ಒಳಗೆ ಬಂದು ಇದೇನು ರಸಿಕತೆ! ನೆರೆಹೊರೆಯವರು ನೋಡಿ ನಕ್ಕಾರು' ಎಂದ.



ಪಾರ್ವತಿ ಆ ಕ್ಷಣ ನಿರ್ಣಾಯಕ ಸ್ವರದಲ್ಲಿ ನುಡಿದಳು— ಗೋಪಿ, ಬಾ ಇಲ್ಲಿ ನಾನು ಈ ಮನೆಯಲ್ಲಿ ಕ್ಷಣ ಕಾಲ ಇರಲಾರೆ, ಎಲ್ಲಿಯಾದರೂ ಹೋಗೋಣ.

ತಾಯಿಯ ಸಲಹೆಯಂತೆ ಗೋಪಿ ಎತ್ತಿನ ಗಾಡಿ ತರಲು ಹೋದ.

ಪಾರ್ವತಿ ಮನೆ ಬಿಟ್ಟು ಹೊರಡುವ ಕಾಲ ಸನ್ನಿಹಿತವಾಯ್ತು. ಆಕೆ ಕೆಲ ಸಾಮಾನುಗಳನ್ನು ಕಟ್ಟಿಕೊಂಡಳು. ಇನ್ನು ಹೊರಡುವಷ್ಟರಲ್ಲಿ ಆಕೆಯ ದೃಷ್ಟಿ ಕೊಠಡಿಯಲ್ಲಿದ್ದ ಶಶಿಧರನ ಬಳಿಗೆ ಹರಿಯಿತು, ಅವನ ಕಣ್ಣು ಒದ್ದೆಯಾಗಿದ್ದವು. ಅವನು ಗುಣುಗುಟ್ಟಿದ. 'ಪಾರೂ, ನಾನೇನು ಪಶುವೆಂದು ತಿಳಿದೆಯಾ?'

ಆಕಸ್ಮಾತ್ತಾಗಿ ಪಾರ್ವತಿಯ ಕೈಯಲ್ಲಿಯ ಬೀಗದ ಸರ ಕಳಚಿ ಬಿದ್ದ ಸದ್ದಾಯಿತು. ಶಶಿಧರನ ದೃಷ್ಟಿ ಪಾರ್ವತಿಯೆಡೆಗೆ ಹೋಯಿತು. ಪಾರ್ವತಿ ಎಂದಿನಂತೆಯೇ ಇದ್ದಳು. ಅಗಲುವಿಕೆಯ ಸೆಳೆವಿಗೆ ಹಿಂದೆ ಎಡೆಗೊಡುವ ಆಶೆ ಈಗ ಮನೆ ಬಿಟ್ಟು ಹೊರಡಲು ಅಣಿಯಾಗಿದ್ದಳು.

'ಪಾರೂ, ಇಲ್ಲಿ ಸ್ವಲ್ಪ ಬಂದು ಹೋಗುವಿ ಏನು?'

ಆಕೆ ಶಿಲಾಮೂರ್ತಿಯಂತೆ ನಿಂತಿದ್ದಳು.

ಶಶಿಧರ ನುಡಿದ. 'ಹೌದು ನೀನು ಬರುವುದಿಲ್ಲ. ನನಗೆ ಗೊತ್ತು. ಪಶುವಿಗಿಂತಲೂ ಕೀಳಾಗಿ ನಾನು ನಿನ್ನೊಡನೆ ಈ ವರೆಗೆ ವರ್ತಿಸಿದೆ. ಇಷ್ಟು ದಿನ ನೀನು ಸಹಿಸಿದುದೇ ಹೆಚ್ಚು!'

ಮುಂದೆ ಅವನ ಕಂಠಸ್ತಂಭಿತವಾಗಿ ಮಾತು ಹೊರಡಲಿಲ್ಲ. ಮತ್ತೆ ಸರಿಪಡಿಸಿಕೊಂಡು ಹೇಳಿದ—

ನಿನ್ನ ನಿರ್ಧಾರ ಬದಲಿಸುವ ಯೋಗ್ಯತೆ ನನಗಿಲ್ಲ. ಏನಾದರೂ ನಿನಗೆ ಕಲ್ಯಾಣವಾಗಲಿ. ಆದರೆ ನೀನು ಹೋದ ಮೇಲೆ ನಾನು ಜೀವಿಸುವುದು ಸಾಧ್ಯವೇ ವಿಚಾರಿಸು. ಅಂದು ಒಂದು ಕಾಲಕ್ಕೆ ನೀನು ನನ್ನ ಸಂಗೀತಕ್ಕೆ ಆರಾಧ್ಯ ದೇವತೆಯಾಗಿದ್ದೆ. ಸ್ಫೂರ್ತಿಯ ಬಗ್ಗೆ ಎನಿಸಿದ್ದೆ. ಒಳ್ಳೆ ವಿಮರ್ಶಕಳಾಗಿ ಕಲೆ ಪ್ರೋತ್ಸಾಹಿಸಿದೆ. ಆ ನಮ್ಮ ಪ್ರೀತಿಯ ಪರಿಸರ ನೆನಿಸಿಕೊ. ಆ ದಿನ ಮರಳಿ ಬಂದಾವೆ? ಛೆ! ರೋಮಾಂಚಕತೆ ನಶಿಸಿತು!'

ಶಶಿಧರನಿಗೆ ಮುಂದೆ ಮಾತು ಬರಲಿಲ್ಲ. ಬಿಕ್ಕಿ ಬಿಕ್ಕಿ ಅಳತೊಡಗಿದ— ಹಸುಗೂಸಿನಂತೆ.

ಪಾರ್ವತಿ ಪಾಷಾಣವಾಗಿದ್ದಳು. ವಿಚಾರ ಪರವಶಳಾದಳು. ಆಕೆಯ ಮನಸ್ಸು ತಿರುಗಿತು. ಅವನನ್ನಾದರೂ ನೋಡಿಕೊಳ್ಳುವರಾರು ಮುಂದು? ಎಂಬ ವಿಚಾರಮಾಲೆ ಆಕೆಯನ್ನು ಮುತ್ತಿ ಗಾಸಿ ಆಗಿಸಿತು.

ಮರುಕ್ಷಣವೇ ಆಕೆ ಅವನ ಪಾದಕ್ಕೆ ಬಿದ್ದಳು.

'ನಿಮ್ಮನ್ನೆಂದೂ ನಾನು ಬಿಟ್ಟಿರಲಾರೆ. ಏನಾದರೂ ಹೊರ ಹೊರಡಲಾರೆ.

'ಅಯ್ಯೋ! ಅನೇಕ ಸಲ ನಾನು ನಿನ್ನನ್ನು ಅವಮಾನಿಸಿದೆ. ಕೈ ಎತ್ತಿದೆ ಕೂಡ'

...........ಮಾತು ಮುಂದುವರಿವಾಗಲೆ ಪಾರ್ವತಿ ಅವನ ಬಾಯಿ ಮುಚ್ಚಿದಳು. ಹಿಂದಿನದನ್ನು ಮರೆತು ಬಿಡಿರಿ ಅಂದಳು.

ಅವ್ವಾ, ಗಾಡಿ ಬಂದಿದೆ ಹೊರಡೋಣವೆ?'
ಗೋಪಿ ಕೇಳಿದ.

'ಗೋಪಿ, ನಾನು ಬರಲಾರೆ'

'ಇದೇನು ಇಷ್ಟರಲ್ಲಿ ನಿರ್ಧಾರ ಹಾರಿತೆ?'

'ಗೋಪಿ, ಅದೆಲ್ಲ ನಿನಗೆ ತಿಳಿಯದು. ನಿನ್ನ ತಂದೆಯೊಡನೆ ನಾನಿದ್ದು ಮೂವತ್ತು ವರ್ಷ ಸಂದವು. ಅವರ ಹೃದಯ ಹೊಳೆದಿದ್ದಿಲ್ಲ. ಈಗ ನಿಚ್ಚಳವಾಯಿತು. ಇದೇ ನನ್ನ ಮನೆ. ಎಂದೂ ಮಮತೆಯ ಮನೆ!'

ಗೋಪಿ ಧಿಗ್ಮೂಢನಾಗಿ ನಿಂತ. (ಆಧರಿಸಿದುದು)

---

"ನೋಡದ ಕಣ್ಣಳೇಕೆ, ಸಲೆ ಕೇಳದ ಕರ್ಣಮದೇಕೆ, ಭಕ್ತಿಯಿಂ
ಪಾಡದ ಬಾಯದೇಕೆ, ಪೆಸರ್ಗೊಳ್ಳದ ಜಿಹ್ವೆಯದೇಕೆ, ಪೂಜೆಯಂ
ಮಾಡದ ಕೈಗಳೇಕೆ, ನೆರೆ ಸೋಂಕದ ದೇಹಮದೇಕೆ, ಕೂಡಿಯ-
ಳ್ಕಾಡದ ಚಿತ್ತವೇಕೆನೆಗೆ ಹಂಪಯ ಲಿಂಗವೆ ನಿಮ್ಮೊಳ್ಳಕ್ಕರಿಂ"

—ಪಂಪಾಶತಕ



## "ಜನಹಿತ ಸಾಧನೆಯಲ್ಲಿ ಅರ್ಥಪೂರ್ಣ ಕಾರ್ಯಗಳ ಆರು ತಿಂಗಳು"

**ಕಳೆದ ನೂರೆಂಭತ್ತು ದಿನಗಳಲ್ಲಿ ಸರ್ಕಾರ ಇಟ್ಟ ಹೆಜ್ಜೆ ದಿಟ್ಟ; ತಳೆದ ನಿಲುವು ಅಚಲ. ಕೈಗೊಂಡ ಕಾರ್ಯವನ್ನು ಆಗುಮಾಡುವ ವಿಶ್ವಾಸ.**

* ಯೋಜನಾ ವೆಚ್ಚದಲ್ಲಿ ಈ ವರ್ಷ ನೂರು ಕೋಟಿ ರೂ. ಹೆಚ್ಚಳ.
* ಅಭಾವ ಪರಿಹಾರ ಕಾರ್ಯಗಳಿಗೆ ಈವರೆಗೆ 50 ಕೋಟಿ ರೂ. ವೆಚ್ಚ.
* ರೈತರು ಹಾಗೂ ಗ್ರಾಹಕರಿಗೆ ನೀಡಿರುವ ರಿಯಾಯಿತಿ ಸುಮಾರು 50 ಕೋಟಿ ರೂ.

### ಕುಡಿಯಲು ನೀರು; ಕೃಷಿಗೆ ನೀರಾವರಿ:

ಕುಡಿಯುವ ನೀರಿನ ತೀವ್ರ ಅಭಾವವಿರುವ ಗ್ರಾಮಾಂತರ ಪ್ರದೇಶದಲ್ಲಿ 25 ಕೋಟಿ ರೂ. ವೆಚ್ಚದಲ್ಲಿ 12,800 ಕೊಳವೆ ಬಾವಿಗಳ ಸೌಕರ್ಯ. ಪಟ್ಟಣ ಪ್ರದೇಶದಲ್ಲಿ 1.19 ಕೋಟಿ ರೂ. ವೆಚ್ಚದಲ್ಲಿ 550 ಕೊಳವೆ ಬಾವಿಗಳ ಸೌಲಭ್ಯ. ಎಲ್ಲ ಹಳ್ಳಿಗೂ ನೀರು ಪೂರೈಕೆಗಾಗಿ 100 ಕೋಟಿ ರೂ. ಯೋಜನೆ.

ಹಳೆ ನೀರಾವರಿ ಯೋಜನೆಗಳಿಗೆ ವಿಶೇಷ ಗಮನ. ದೊಡ್ಡ ಮತ್ತು ಮಧ್ಯಮ ನೀರಾವರಿಗೆ 89 ಕೋಟಿ ರೂ ಕಾವೇರಿ ನದಿ ಕಣಿವೆ ಯೋಜನೆಗೆ 84 ಕೋಟಿ ರೂ. 80,000 ಎಕರೆಗೆ ಅಧಿಕ ನೀರಾವರಿ. 15 ಕೋಟಿ ರೂ. ವೆಚ್ಚದಲ್ಲಿ 400 ಹೊಸ ಕೆರೆಗಳ ನಿರ್ಮಾಣ.

### ರೈತರಿಗೆ ರಿಯಾಯಿತಿ:

ರೈತರಿಗೆ ಸುಮಾರು 36 ಕೋಟಿ ರೂಪಾಯಿಗಳಷ್ಟು ವಿವಿಧ ರೀತಿಯ ಪರಿಹಾರಗಳು.

### ಅಭಾವ ಪರಿಹಾರ ಕಾರ್ಯ:

ತೀವ್ರ ಅಭಾವಪೀಡಿತ ಪ್ರದೇಶಗಳ ಸಮಸ್ಯೆ ಪರಿಹಾರಕ್ಕೆ 50 ಕೋಟಿ ರೂ ವೆಚ್ಚ. ಕೃಷಿ ಕಾರ್ಮಿಕರು, ರಸ್ತೆ ಮುಂತಾದ ಕಾಮಗಾರಿ ಕೆಲಸಗಾರರ ಕೂಲಿ ದರದಲ್ಲಿ ರೂ. 5 ರಿಂದ 6.50 ಕ್ಕೆ ಹೆಚ್ಚಳ. ಅಭಾವ ಪರಿಹಾರ ಕಾರ್ಯ ಪರಿಶೀಲನೆಗೆ ಪ್ರತಿ ಜಿಲ್ಲೆಗೆ ಒಬ್ಬೊಬ್ಬ ಸಚಿವರ ನೇಮಕ.

### ಕೈಗಾರಿಕೆ:

ಶೀಘ್ರದಲ್ಲೇ ಹೊಸ ಕೈಗಾರಿಕಾ ನೀತಿಯ ಪ್ರಕಟಣೆ. ಗ್ರಾಮೀಣ ಕೈಗಾರಿಕೆಗಳಿಗೆ ಆದ್ಯತೆ. ತಿಂಗಳಿಗೆ ಒಂದು ಸಾವಿರದಂತೆ ಸಣ್ಣ ಕೈಗಾರಿಕಾ ಘಟಕಗಳ ಸ್ಥಾಪನೆಯ ಗುರಿ.

LICENCED TO POSTWITHOUT PRE PAYMENT LICENCE NO. 3
SIDDAGANGA MONTHLY Reg. No. KRN Q-9

" ಜನಹಿತ ಸಾಧನೆಯ ಕಾರ್ಯಗಳು "

**ಅಧಿಕಾರ ವಿಕೇಂದ್ರೀಕರಣ:**

ಪುರಸಭೆ, ನಗರಸಭೆಗಳ ಚುನಾವಣೆಗೆ ನಿರ್ಧಾರ; ಹದಿನೆಂಟು ವರ್ಷ ತುಂಬಿದವರಿಗೆಲ್ಲ ಮತಾಧಿಕಾರ. ಮಹಿಳೆಯರಿಗೆ ಸೂಕ್ತ ಪ್ರಾತಿನಿಧ್ಯ.

**ಲೋಕಾಯುಕ್ತ:**

ಸಾರ್ವಜನಿಕ ಶೀಲವೃದ್ಧಿ ಸಾಧ್ಯವಾಗುವ ಲೋಕಾಯುಕ್ತ ರಚನೆ ಒಂದು ಮಹತ್ವದ ಕ್ರಮ. ಭ್ರಷ್ಟಾಚಾರದ ಆಪಾದನೆಗೆ ಒಳಗಾದ ಅಧಿಕಾರಿ, ರಾಜಕಾರಿಣಿ ಈ ಸುಗ್ರೀವಾಜ್ಞೆಗೆ ಬದ್ಧ.

**ಹಿಂದುಳಿದ ವರ್ಗಗಳ ಆಯೋಗ:**

ಹಿಂದುಳಿದ ವರ್ಗಗಳ ಹಿತರಕ್ಷಣೆಗೆ ನೇಮಕವಾದ ದ್ವಿತೀಯ ಹಿಂದುಳಿದ ವರ್ಗಗಳ ಆಯೋಗ ಹಾಗೂ ಅಲ್ಪಸಂಖ್ಯಾತರ ಸಮಸ್ಯೆ ಪರಿಶೀಲನೆಗೆ ರಚಿತವಾಗಿರುವ ಅಲ್ಪಸಂಖ್ಯಾತರ ಆಯೋಗಗಳ ಕಾರ್ಯಾರಂಭ. ಇದರಿಂದ ದುರ್ಬಲವರ್ಗದ ರಕ್ಷಣೆ. ಹರಿಜನ–ಗಿರಿಜನ ಅಭಿವೃದ್ಧಿ ಮಂಡಳಿಗೆ 12 ಕೋಟಿ ರೂ. ನೀಡಿಕೆ.

**ಶಿಕ್ಷಣ:**

ಶಿಕ್ಷಣ ಕ್ಷೇತ್ರದ ಸಮಗ್ರ ಸುಧಾರಣೆಗೆ ಸಾಧ್ಯವಾಗುವ ಶಿಕ್ಷಣ ವಿಧೇಯಕಕ್ಕೆ ಸಿದ್ಧತೆ. ರಾಜ್ಯದ ವಿದ್ಯಾರ್ಥಿಗಳಿಗೆ ನಿಗದಿಪಡಿಸಿದ ಮೆಡಿಕಲ್ ಸೀಟುಗಳಿಗೆ ಸೀಟು ಶುಲ್ಕ ರದ್ದು. ಸರ್ಕಾರಿ ಸೇವೆಯಲ್ಲಿರುವ ಸ್ಥಳೀಯ ಹಾಗೂ ಸ್ಟೈಪೆಂಡರಿ ಪದವೀಧರರೂ ಹಾಗೂ ಇತರ ಅಭ್ಯರ್ಥಿಗಳಿಗೆ ಸರ್ಕಾರೀ ಸೇವೆಗೆ ಸೇರಲು ಗರಿಷ್ಠ ವಯೋಮಿತಿ ಏರಿಕೆ. ಡಿಗ್ರಿ ಹಾಗೂ ಸ್ನಾತಕೋತ್ತರ ಪದವಿಗಳಲ್ಲಿ ಅತ್ಯುತ್ತಮ ಅಂಕ ಪಡೆದ ಹರಿಜನ–ಗಿರಿಜನ ವಿದ್ಯಾರ್ಥಿಗಳಿಗೆ ಸರ್ಕಾರಿ ಅಧಿಕಾರಿಗಳಿಗೆ ನೇರ ನೇಮಕದ ಅವಕಾಶ. ಹೊಸ ಇಂಗ್ಲಿಷ್ ಶಾಲೆಗಳ ಮಂಜೂರಾತಿ ರದ್ದು.

**ಆಡಳಿತದಲ್ಲಿ ಕನ್ನಡ:**

ಆಡಳಿತದಲ್ಲಿ ಕನ್ನಡ ಬಳಕೆ ಕಡ್ಡಾಯ. ಕನ್ನಡ ಬಳಕೆ ಆಗುತ್ತಿದೆಯೋ ಎಂಬುದನ್ನು ಪರಿಶೀಲಿಸಿ, ಸಮಸ್ಯೆಗಳಿದ್ದರೆ ಸಲಹೆ ಸೂಚಿಸಲು ಕಾವಲು ಸಮಿತಿ.

ಅರಣ್ಯ ಅಭಿವೃದ್ಧಿ, ಮನೆಯಿಲ್ಲದವರಿಗೆ ಮನೆ, ನಿವೇಶನ, ಇಲಾಖಾ ಸಲಹಾ ಸಮಿತಿಗಳ ನೇಮಕ. ಹೀಗೆ ಜನಹಿತಕ್ಕಾಗಿ ಕೈಗೊಂಡಿರುವ ಕ್ರಮಗಳು ಹಲವಾರು. ಸಾಧನೆಗೆ ಕ್ರಮಬದ್ಧವಾಗಿ ಕಾರ್ಯನಿರತ. ಪ್ರಥಮ ವರ್ಷದ ಪ್ರಥಮಾರ್ಧದಲ್ಲಿ ಆಶಾದಾಯಕ ಮುನ್ನಡೆ.

ಮಹಾ ಜನತೆಗೆ ನೀಡಿರುವ ಆಶ್ವಾಸನೆಗಳನ್ನು ಈಡೇರಿಸಲು ಪಣತೊಟ್ಟಿದೆ.

ಕರ್ನಾಟಕ ಸರ್ಕಾರ.

ಪ್ರಕಟಣೆ : **ವಾರ್ತಾ ಮತ್ತು ಪ್ರಚಾರ ಇಲಾಖೆ,**
**ಕರ್ನಾಟಕ ಸರ್ಕಾರ, ಬೆಂಗಳೂರು.**

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ